ರಾಜಸೇವಾಸಕ್ತ

ಶ್ರೀಮಾನ್ ಬಿ.ಎಂ. ಶ್ರೀಕಂಠಯ್ಯ



ರಾಜಸೇವಾಸಕ್ತ
ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು

*

ಕನ್ನಡ ನಾಡಿನ

ಹಿರಿಯರೂ ಮಾನ್ಯಗುರುಗಳೂ

ಕನ್ನಡಸಾಹಿತ್ಯಪರಿಷತ್ತಿನ ಉಪಾಧ್ಯಕ್ಷರೂ ಆದ

ರಾಜಸೇವಾಸಕ್ತ

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ

ಎಂ.ಎ., ಬಿ.ಎಲ್. ಅವರಿಗೆ

ಶಿಷ್ಯನು ಅತ್ಯಂತ ವಿನಯದಿಂದ

ಸಮರ್ಪಿಸಿದ

ಕಾಣಿಕೆ

*

## FOREWORD

Consequent on the development of new industries, big factories are being established everywhere to-day. New Cities and Extensions are springing up to meet the wants of the growing population. Fast-moving vehicles, such as motor cars, buses, lorries, cycles, etc., have become a part of the amenities of civilised life. Electricity is being used largely for domestic purposes. As a result of these improvements, accidents and casualties, whether on the road, in the factory, or in the home are growing with appalling rapidity. As the poet says "Never morning wore to evening but some heart did break". It has accordingly become necessary to impart instruction to our boys and girls, and to adults also in *Safety First Methods* to save them from danger. Youth is the proper time to foster good habits and it is in schools that education in road sense must begin.

Ruskin says that "There is no wealth but life". The most precious possessions of a country are its men and women, while boys and girls form its backbone. *Safety First* is a national movement for the good of the entire community, irrespective of caste or creed.

The Safety First Primer in Kannada published by Messrs. Longmans, Green & Co., is I understand, already in use of the Primary Schools of the Mysore State. I welcome the commendable efforts of Mr. M. Venkobachar, B.A., B.T., Head Master, Middle School, Chamarajpet, Bangalore City, in bringing forth this book, "*Safety First Reader* I" with the object of teaching children in Middle Schools, the rules of the road, safe cycling, safe travelling in motor buses and cars, safety in the home, etc. Not only children but even grown-ups are in need of proper instruction in *Safety First Methods*. I recommend this book to every man and woman, and particularly to schoolmasters.

BANGALORE CITY,
11*th May* 1939.

K. V. ANANTHARAMAN,
*Member of Council.*

# ಕೃತಜ್ಞತಾ ಸೂಚನೆ

ಮೈಸೂರು ದೇಶದ ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರವರು "ಪ್ರಾಣರಕ್ಷಣೆಯು ಪ್ರಥಮ" (ಮೊದಲನೆಯ ಪುಸ್ತಕ) ಎಂಬುದನ್ನು ಪ್ರಾಥಮಿಕ ಪಾಠಶಾಲೆಗಳ ನಾಲ್ಕನೆಯ ತರಗತಿಗೆ ಪಠ್ಯಪುಸ್ತಕವನ್ನಾಗಿ ಮಂಜೂರು ಮಾಡುವುದರ ಮೂಲಕ ಪ್ರೋತ್ಸಾಹಕೊಟ್ಟದ್ದರ ಫಲವು ಈಗ ಪ್ರಕಟವಾಗಿರುವ "ಪ್ರಾಣರಕ್ಷಣೆಯು ಪ್ರಥಮ" (ಒಂದನೆಯ ರೀಡರು) ಎಂಬ ಪುಸ್ತಕವಾಗಿರುತ್ತದೆ. ಇದಕ್ಕಾಗಿ ಡೈರೆಕ್ಟರವರನ್ನು ಮನಃಪೂರ್ವಕವಾಗಿ ವಂದಿಸುತ್ತೇನೆ.

ಈ ಪುಸ್ತಕವನ್ನು ಬರೆಯುತ್ತಿರುವಾಗ ಮತ್ತು ಮುದ್ರಣಕಾರ್ಯವು ನಡೆಯುತ್ತಿರುವಾಗ ಅನೇಕ ವಿಧಗಳಲ್ಲಿ (ಸಲಹೆಗಳನ್ನು ಕೊಡುವುದು, ಅಂಕಿ ಅಂಶಗಳನ್ನು ಒದಗಿಸುವುದು — ಇವೇ ಮೊದಲಾದುವು) ಅನೇಕರು ಸಹಾಯಮಾಡಿರುತ್ತಾರೆ. ಇವರುಗಳನ್ನು ವಂದಿಸದಿದ್ದರೆ ನನ್ನ ಮುಖ್ಯ ಕರ್ತವ್ಯಗಳಲ್ಲಿ ಒಂದನ್ನು ಮಾಡಿದಂತಾಗುವುದಿಲ್ಲ.

1. ದಿ ಸೇಫ್ಟಿ ಫಸ್ಟ್ ಅಸೋಸಿಯೇಷನ್ ಆಫ್ ಇಂಡಿಯ, ಬೊಂಬಾಯಿ–ಇದರ ಸೆಕ್ರೆಟರಿಗಳಾದ ಮಿ॥ ಎಸ್. ಟ್ರಾಲಿಪ್, ಬಿ.ಎಸ್‌ಸಿ. ಅವರು. 2. ಮೈಸೂರು ಸಂಸ್ಥಾನದ ಇನ್‌ಸ್ಪೆಕ್ಟರ್-ಜನರಲ್ ಆಫ್ ಪೋಲೀಸ್ ಅವರು. 3. ಮೈಸೂರು ಸಂಸ್ಥಾನದ ಚೀಫ್ ಎಲೆಕ್ಟ್ರಿಕಲ್ ಇಂಜಿನಿಯರ್ ಅವರು. 4. ಮೈಸೂರು ಸಂಸ್ಥಾನದ ಡೈರೆಕ್ಟರ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್ ಅವರು. 5. ಸೂಪರಿನ್‌ಟೆನ್‌ಡೆಂಟ್, ಬೆಂಗಳೂರು ಪವರ್ ಅಂಡ್ ಲೈಟಿಂಗ್ ಅವರು. 6. ಬೆಂಗಳೂರು ಸಿಟಿ ಸೂಪರಿನ್-ಟೆನ್‌ಡೆಂಟ್ ಆಫ್ ಪೋಲೀಸ್ ಅವರು. 7. ಬೆಂಗಳೂರು ಮತ್ತು ಮೈಸೂರು ಸಿಟಿಗಳ ಮ್ಯುನ್ಸಿಪಾಲಿಟಿ ಪ್ರೆಸಿಡೆಂಟ್ ಅವರುಗಳು. 8. ಶಿವಮೊಗ್ಗಾ ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರ್ ಅವರು. 9. ರಿಫಾರ್ಮ್ಸ್ ಕಮಿಟಿಯ ಅಸಿಸ್ಟೆಂಟ್ ಸೆಕ್ರೆಟರಿಗಳಾದ ಶ್ರೀಮಾನ್ ಎಂ. ಕೆ. ವರದರಾಜನ್, ಎಂ.ಎ., ಬಿ.ಎಲ್. ಅವರು. ಇವರೆಲ್ಲರಿಗೂ ನಾನು ಚಿರಋಣಿಯಾಗಿರುತ್ತೇನೆ.

ಹಸ್ತಪ್ರತಿಯನ್ನು ಓದಿ ಅಭಿಪ್ರಾಯಗಳನ್ನು ಕಳುಹಿಸಿ ಪ್ರೋತ್ಸಾಹಿಸಿರುವ ಮಹನೀಯರಿಗೂ, ಕರಡು ಪತ್ರಗಳನ್ನು ಸಾವಧಾನದಿಂದ ನೋಡಿ ತಪ್ಪುಗಳನ್ನು ತಿದ್ದಿ ಸಹಾಯಮಾಡಿರುವ ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿ, ಎಂ.ಎ. ಅವರಿಗೂ ನಾನು ಕೃತಜ್ಞನಾಗಿರುತ್ತೇನೆ. ಅಭಿಪ್ರಾಯಗಳೆಲ್ಲಾ ಪುಸ್ತಕದ ಕೊನೆಯಲ್ಲಿ ಮುದ್ರಿಸಲ್ಪಟ್ಟಿವೆ.

"ಸ್ಟಾಪ್, ಲುಕ್-ಲಿಸನ್" ಎಂಬ ಪುಸ್ತಕದಲ್ಲಿ ಅಚ್ಚಾಗಿರುವ ಚಿತ್ರಗಳನ್ನು ಉಪಯೋಗಿಸುವುದಕ್ಕೆ ಅವಕಾಶಕೊಟ್ಟು ಅವುಗಳ ಪಡಿ ಅಚ್ಚುಗಳನ್ನು ಎರವಾಗಿ ಕೊಟ್ಟಿರುವ ದಿ ಸೇಫ್ಟಿ ಫಸ್ಟ್ ಅಸೋಸಿ-ಯೇಷನ್ ಆಫ್ ಇಂಡಿಯ ಇದರ ಸೆಕ್ರೆಟರಿಯವರಿಗೂ ಮತ್ತು "ಡ್ರೈವಿಂಗ್ ಲೈಸೆನ್ಸ್" ಎಂಬ ಪುಸ್ತಕದಲ್ಲಿ ಅಚ್ಚಾಗಿರುವ ಚಿತ್ರಗಳನ್ನು ಉಪಯೋಗಿಸುವುದಕ್ಕೆ ಅವಕಾಶವನ್ನು ಕೊಟ್ಟು ಅವುಗಳ ಪಡಿ ಅಚ್ಚುಗಳನ್ನು ಎರವಾಗಿ ಕೊಟ್ಟಿರುವ ಇನ್‌ಸ್ಪೆಕ್ಟರ್-ಜನರಲ್ ಆಫ್ ಪೋಲೀಸ್ ಅವರಿಗೂ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ಕೊನೆಯದಾಗಿ, ಪುಸ್ತಕವನ್ನು ಜಾಗ್ರತೆಯಾಗಿಯೂ, ಅಂದವಾಗಿಯೂ ಮುದ್ರಿಸಿರುವ ಬೆಂಗಳೂರು ಪ್ರೆಸ್ಸಿನವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

**ಎಂ. ವೆಂಕೋಬಾಚಾರ್ಯ**

## ದ್ವಿತೀಯ ಮುದ್ರಣದ ಪೀಠಿಕೆ

ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರವರು ಈ ಪುಸ್ತಕವನ್ನು ಈ ವರ್ಷ ಮಿಡ್ಲ್ ಸ್ಕೂಲಿನ ಮೊದಲನೆಯ ಮೂರು ತರಗತಿಗಳಿಗೆ ಎಕ್ಸ್‌ಟ್ರಾ ರೀಡಿಂಗ್ ಪುಸ್ತಕವನ್ನಾಗಿ ಮಂಜೂರು ಮಾಡಿರುವುದರ ಫಲವಾಗಿ ಈ ದ್ವಿತೀಯ ಮುದ್ರಣವನ್ನು ಕೈಕೊಳ್ಳಬೇಕಾಗಿ ಬಂದಿತು. (Notification No. D. 102 of 38–39, dated 13th June 1939) ಈ ಪ್ರೋತ್ಸಾಹಕ್ಕಾಗಿ ಅವರಿಗೆ ನಾನು ಚಿರಋಣಿಯಾಗಿರುತ್ತೇನೆ.

"ಸ್ಟಾಪ್, ಲುಕ್-ಲಿಸನ್" ಎಂಬ ಪುಸ್ತಕದಲ್ಲಿ ಅಚ್ಚಾಗಿರುವ ಚಿತ್ರಗಳ ಪಡಿ ಅಚ್ಚುಗಳನ್ನು ತಯಾರಿಸಿಕೊಂಡು, ಅವುಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ಅನುಮತಿಯನ್ನು ಕೊಟ್ಟಿರುವ ದಿ ಸೇಫ್ಟಿ ಫಸ್ಟ್ ಅಸೋಸಿಯೇಷನ್ ಆಫ್ ಇಂಡಿಯ ಇದರ ಸೆಕ್ರೆಟರಿಯವರಿಗೂ ಮತ್ತು "ಡ್ರೈವಿಂಗ್ ಲೈಸೆನ್ಸ್" ಎಂಬ ಪುಸ್ತಕದಲ್ಲಿ ಅಚ್ಚಾಗಿರುವ ಕೆಲವು ಚಿತ್ರಗಳ ಪಡಿ ಅಚ್ಚುಗಳನ್ನು ತಯಾರಿಸಿಕೊಂಡು ಅವುಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ಅನುಮತಿಯನ್ನು ಕೊಟ್ಟಿರುವ ಇನ್‌ಸ್ಪೆಕ್ಟರ್-ಜನರಲ್ ಆಫ್ ಪೋಲೀಸ್ ಅವರಿಗೂ ನಾನು ಮನಃಪೂರ್ವಕವಾಗಿ ವಂದನೆಗಳನ್ನು ಸಮರ್ಪಿಸುತ್ತೇನೆ.

**ಎಂ. ವೆಂಕೋಬಾಚಾರ್ಯ**

# ವಿಷಯಾನುಕ್ರಮಣಿಕೆ

# ಪ್ರಸ್ತಾವನೆ

## ಪ್ರಾಣರಕ್ಷಣೆಯ ಸಂಘದ ಆವಶ್ಯಕತೆ ಮತ್ತು ಅದರ ಸ್ವರೂಪ

"ನಾವು ಈಗೊಂದು ಪರ್ವಕಾಲದಲ್ಲಿ ವಾಸಮಾಡುತ್ತಿದ್ದೇವೆ. ಜನರು ತಮ್ಮ ಜೀವನಕ್ರಮಗಳನ್ನು ಕಾಲಸ್ಥಿತಿಗೆ ತಕ್ಕಂತೆ ಅನುಸರಿಸಬೇಕು. ಇಂದಿನ ಪ್ರಪಂಚದ ನೀತಿನಿಯಮಗಳೂ, ಯುದ್ಧಕ್ರಮಗಳೂ, ಪ್ರಯಾಣಸಾಧನಗಳೂ, ಆಡಳಿತಕ್ರಮಗಳೂ ಎಲ್ಲವೂ ನವೀನವಾಗಿವೆ. ಜಾಗರೂಕನಾಗಿಲ್ಲದಿದ್ದರೆ ಮಾನವನು ಹೊಸ ರೀತಿಯ ವಿಪತ್ತುಗಳಿಂದ ಸಾಯಬೇಕಾಗುತ್ತದೆ. ಉಪಾಧ್ಯಾಯನಲ್ಲದೆ ಮತ್ತಾರು ಇವುಗಳನ್ನು ಬಾಲಕ ಬಾಲಿಕೆಯರಿಗೆ ಶಿಕ್ಷಣ ಕೊಡಬಲ್ಲರು."

ಇಪ್ಪತ್ತನೆಯ ಶತಮಾನವನ್ನು "ಯಂತ್ರದ ಶತಮಾನ" ಎಂದು ಅನೇಕರು ಹೇಳುತ್ತಿರುವರು. ಕೈಗಾರಿಕೆ, ವ್ಯವಸಾಯ ಮೊದಲಾದುವುಗಳನ್ನು ಯಂತ್ರಗಳ ಸಹಾಯದಿಂದ ಮಾಡಲು ಜನರು ಉದ್ಯುಕ್ತರಾಗಿರುವರು. ವೈಜ್ಞಾನಿಕರು ವಿಜ್ಞಾನಶಾಸ್ತ್ರಗಳ ನಿಯಮಗಳನ್ನು ಅನ್ವಯಿಸಿ ಹೊಸಹೊಸ ಯಂತ್ರ ಮೊದಲಾದುವುಗಳನ್ನು ಕಂಡುಹಿಡಿದಿರುವರು; ಮತ್ತು ಹಿಡಿಯುತ್ತಿರುವರು. ಸಮಾಜದಲ್ಲಿ ದಿನೇ ದಿನೇ ಆಗುತ್ತಿರುವ ಬದಲಾವಣೆಗಳೇ ಇದಕ್ಕೆ ನಿದರ್ಶನ. ಜನರು ಇವುಗಳನ್ನು ಉಪಯೋಗಿಸಿಕೊಂಡು ಅನೇಕ ಪ್ರಯೋಜನಗಳನ್ನು ಹೊಂದುತ್ತಿರುವರು.

ಪ್ರತಿ ದೇಶದಲ್ಲಿಯೂ ದೊಡ್ಡ ದೊಡ್ಡ ಕಾರ್ಖಾನೆಗಳು ಸ್ಥಾಪಿಸಲ್ಪಟ್ಟು ಸಾಮಾನುಗಳು ಹೇರಳವಾಗಿ ತಯಾರಿಸಲ್ಪಡುತ್ತಿರುವುವು. ಪ್ರತಿ ದಿವಸವೂ ಸಾವಿರಾರು ಕೂಲಿಗಾರರು ಈ ಕಾರ್ಖಾನೆಗಳಲ್ಲಿ ಏಕತ್ರ ಸೇರಿ ಕೆಲಸಮಾಡುತ್ತಿರುವರು. ಈ ರೀತಿ ತಯಾರಾದ ಸಾಮಾನುಗಳನ್ನು ಸ್ಥಳದಿಂದ ಸ್ಥಳಕ್ಕೆ ಜಾಗ್ರತೆಯಾಗಿ ಸ್ವಲ್ಪ ಖರ್ಚಿನಿಂದ ಸಾಗಿಸುವುದಕ್ಕೆ ರೈಲ್ವೆ, ಲಾರಿ ಮೊದಲಾದ ಹೊಸಹೊಸ ಸಂಚಾರ ಸೌಕರ್ಯಗಳನ್ನು

ಏರ್ಪಡಿಸಿರುತ್ತಾರೆ. ಕೇವಲ ವ್ಯವಸಾಯ ದೇಶವಾದ ಇಂಡಿಯಾ ದೇಶದಲ್ಲಿಯೂ ಸಹ ಕಾರ್ಖಾನೆಗಳು ಸ್ಥಾಪಿಸಲ್ಪಟ್ಟು ಅನೇಕ ಕೈಗಾರಿಕೆಗಳು ಅಭಿವೃದ್ಧಿಯಾಗುತ್ತಿರುವುವು. ಹೊಸ ಹೊಸ ಪಟ್ಟಣಗಳು ಉದ್ಭವಿಸುತ್ತಿರುವುವು. ಜನರಿಗೆ ಕಾಲುನಡಿಗೆಯಿಂದಲೇ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಜಾಗ್ರತೆಯಾಗಿ ಹೋಗಲು ಆಗದೆ, ಹೆಚ್ಚು ಖರ್ಚಿಲ್ಲದೆ ಜಾಗ್ರತೆ ಪ್ರಯಾಣಮಾಡುವುದಕ್ಕೆ ಸಹಕಾರಿಯಾದ ಮೋಟಾರು ಕಾರು, ಬಸ್ಸು, ರೈಲ್ವೆ ಮೊದಲಾದ ಹೊಸ ಸಂಚಾರ ಸೌಕರ್ಯಗಳನ್ನು ಅವರು ಉಪಯೋಗಿಸಿಕೊಳ್ಳಲೇ ಬೇಕಾಗಿರುತ್ತದೆ. ನಾಗರಿಕತೆಯು ಸರ್ವತೋಮುಖವಾಗಿ ಅಭಿವೃದ್ಧಿಯಾಗಿ ಸಮಾಜದ ಪ್ರತಿ ಮುಖದಲ್ಲಿಯೂ ಅನೇಕ ಬದಲಾವಣೆಗಳೂ ಆಗಿರುವುವು; ಮತ್ತು ಆಗುತ್ತಿರುವುವು. ಹಳ್ಳಿಗಳಿಗಿಂತಲೂ ಪಟ್ಟಣಗಳಲ್ಲಿ ಈ ಬದಲಾವಣೆಗಳನ್ನು ಹೆಚ್ಚಾಗಿ ನಾವು ನೋಡಬಹುದು.

ನಾಗರಿಕತೆಯು ಅಭಿವೃದ್ಧಿಯಾದಹಾಗೆಲ್ಲಾ ಅದನ್ನು ಹಿಂಬಾಲಿಸಿ ಆಕಸ್ಮಿಕ ಆಪತ್ತು, ಅನಾಹುತ ಮೊದಲಾದುವುಗಳು ಪರಿಣಾಮರೂಪವಾಗಿ ಹೆಚ್ಚುತ್ತಿರುವುವು. ಮನೆ, ಕಾರ್ಖಾನೆ, ರಸ್ತೆ — ಇವೇ ಮೊದಲಾದುವುಗಳಲ್ಲಿ ಆಕಸ್ಮಿಕ ಅಪಾಯ, ಮರಣ ಮೊದಲಾದುವುಗಳು ಆಗಾಗ್ಗೆ ಸಂಭವಿಸುತ್ತಿರುವುವು. ದೊಡ್ಡ ದೊಡ್ಡ ಪಟ್ಟಣಗಳಲ್ಲಂತೂ ಈ ಆಕಸ್ಮಿಕ ಮರಣಗಳ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಿರುವುದು.[1] ಇವುಗಳ ಕಾರಣಗಳನ್ನು ಕಂಡುಹಿಡಿಯಲು ಯತ್ನಿಸಿದಲ್ಲಿ ಒಂದು ಮುಖ್ಯಾಂಶವು ಹೊರಬೀಳುತ್ತದೆ. ಇದಾವುದೆಂದರೆ— ಜನರ ಅಜ್ಞಾನ, ನಾಗರಿಕತೆಗೆ ಸಂಬಂಧಪಟ್ಟ ವಿಷಯಗಳನ್ನು ಸಂಪೂರ್ಣವಾಗಿ ಅಥವಾ ಸ್ವಲ್ಪಮಟ್ಟಿಗಾದರೂ ತಿಳಿಯದಿರುವುದು. ಆಕಸ್ಮಿಕ ಆಪತ್ತು ಮೊದಲಾದುವುಗಳು ಸಂಭವಿಸಕೂಡದೆಂದು ಬಾಹ್ಯನಿವಾರಣೋಪಾಯಗಳನ್ನು ಏರ್ಪಡಿಸಬಹುದು; ಆದರೆ ಜನರ ಅಜಾಗರೂಕತೆ, ಅವಿವೇಕ, ಅನಾದರಣೆ ಅಥವಾ ಅಲಕ್ಷ್ಯ

1 ಇಂಗ್ಲೆಂಡಿನಲ್ಲಿರುವ ಸ್ಯಾಲ್‌ಫರ್ಡ್ ಸಿಟಿ (Salford) ಎಂಬಲ್ಲಿ 1927–1937ರ ಅವಧಿಯಲ್ಲಿ 15 ವರ್ಷದವಳಗಿನ 14,000 ಮಕ್ಕಳು ಸತ್ತವೆಂದೂ, 4,00,000 ಮಕ್ಕಳಿಗೆ ಅಪಾಯಗಳಾದವೆಂದೂ ತಿಳಿದುಬಂದಿದೆ.

'Road Sense for Children', by Major C. V. Godfrey

ಇವುಗಳಿಂದಾಗುವ ಅನರ್ಥಗಳನ್ನು ಇವು ಸಂಪೂರ್ಣವಾಗಿ ತಡೆಯುಲಾರವು. ಆದುದರಿಂದ ಈ ಯಂತ್ರಯುಗದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಆಕಸ್ಮಿಕ ಅಪಾಯ, ಮರಣ ಮೊದಲಾದುವುಗಳ ಮೂಲಕಾರಣವನ್ನು ಕಂಡುಹಿಡಿದು ಅವರ ನಿವಾರಣೋಪಾಯಗಳನ್ನು ಯೋಚಿಸಬೇಕು.

ಮುಖ್ಯವಾಗಿ ಜನಸಾಮಾನ್ಯದಲ್ಲಿ ಅಜ್ಞಾನವು ಹೆಚ್ಚಾಗಿರುತ್ತದೆ; ಆಧುನಿಕ ವ್ಯವಹಾರಕ್ಕೆ ಅತ್ಯಾವಶ್ಯಕವಾಗಿ ಬೇಕಾಗಿರುವ ಸರಿಯಾದ ತಿಳಿವಳಿಕೆಯು ಇಲ್ಲದಿರುವುದೇ ಮೇಲೆ ತಿಳಿಸಿದ ಆಕಸ್ಮಿಕ ಅಪಾಯ, ಮರಣ ಮೊದಲಾದುವುಗಳಿಗೆ ಕಾರಣವಾಗಿರುತ್ತದೆ. ಆದುದರಿಂದ ಇವನ್ನು ಕಡಮೆಮಾಡಿ ಸರಿಯಾದ ತಿಳಿವಳಿಕೆಯನ್ನುಂಟುಮಾಡುವುದೇ ಈ ಆಕಸ್ಮಿಕ ಆಪತ್ತು, ಮರಣ ಮೊದಲಾದುವುಗಳಿಗೆ ರಾಜೌಷಧಿಯಾಗಿರುತ್ತದೆ.

ರಸ್ತೆಗಳಲ್ಲಿ ಸಂಭವಿಸುವ ಆಕಸ್ಮಿಕ ಅಪಾಯ, ಮರಣಗಳಿಗೆ ಪಾದಚಾರಿಗಳ ಅಜಾಗರೂಕತೆ, ಅವಿವೇಕ ಮೊದಲಾದುವು ಕಾರಣಗಳೆಂದು ತಿಳಿದುಬರುತ್ತದೆ. ಆದರೆ, ಎಲ್ಲ ಸಂದರ್ಭಗಳಲ್ಲಿ ಪಾದಚಾರಿಗಳೇ ಕಾರಣರೆಂದು ಹೇಳಲು ಆಗುವುದಿಲ್ಲ. ವಾಹನಗಳನ್ನು ನಡೆಯಿಸುವವರ ಅಜಾಗರೂಕತೆ, ಅವಿವೇಕ ಮೊದಲಾದುವುಗಳಿಂದಲೂ ಅನೇಕ ಅನರ್ಥಗಳು ಸಂಭವಿಸುವುವು. ಕೆಲವುವೇಳೆ ಸರಿಯಾದ ರಸ್ತೆ, ಎಚ್ಚರಿಕೆಯ ಬೋರ್ಡು ಮೊದಲಾದುವುಗಳು ಇಲ್ಲದೆ ಅನೇಕ ತೊಂದರೆಗಳು ಆಗುವುವು; ಕಾರ್ಖಾನೆಗಳಲ್ಲಿ ಮಾಲೀಕರ ಅಶ್ರದ್ಧೆ ಮೊದಲಾದುವುಗಳಿಂದ ಕೂಲಿಗಾರರಿಗೆ ಅನೇಕ ತೊಂದರೆಗಳಾಗುವುವು.

ಜನಸಾಮಾನ್ಯದಲ್ಲಿರುವ ಅಜ್ಞಾನವನ್ನು ಕಡಮೆಮಾಡುವುದು ಹೇಗೆಂಬುದನ್ನೂ, ಆಧುನಿಕ ವ್ಯವಹಾರಕ್ಕೆ ಬೇಕಾಗಿರುವ ತಿಳಿವಳಿಕೆಯನ್ನು ಜನರು ಹೊಂದುವಂತೆ ಮಾಡುವುದು ಹೇಗೆಂಬುದನ್ನೂ ವಿಚಾರ ಮಾಡಬೇಕು. ಪ್ರತಿ ದೇಶದ ಅಮೂಲ್ಯವಾದ ಸಂಪತ್ತು ಯಾವುದೆಂದರೆ —ಆ ದೇಶದಲ್ಲಿರುವ ಗಂಡಸರು ಮತ್ತು ಹೆಂಗಸರು, ಹುಡುಗರು ಮತ್ತು ಹುಡುಗಿಯರು; ಆದುದರಿಂದ ಪ್ರತಿ ದೇಶದ ಸರ್ಕಾರವು ಈ ಸಂಪತ್ತನ್ನು ಜಾಗರೂಕತೆಯಿಂದ ಕಾಪಾಡಿಕೊಳ್ಳಬೇಕಾಗಿರುತ್ತದೆ.

**"ಈಗಿನ ಮಕ್ಕಳೇ ಮುಂದಿನ ಪ್ರಜೆಗಳು."** ಹೀಗಿರುವುದರಿಂದ ಚಿಕ್ಕವಯಸ್ಸಿನವರನ್ನು ಹತೋಟಿಗೆ ತೆಗೆದುಕೊಂಡು ಸರಿಯಾದ ಶಿಕ್ಷಣವನ್ನು ಕೊಟ್ಟಲ್ಲಿ, ಬಹಳ ಉಪಯೋಗವಾಗುತ್ತದೆ. ಚಿಕ್ಕವಯಸ್ಸಿನಲ್ಲಿಯೇ ಒಳ್ಳೆಯ ಅಭ್ಯಾಸಗಳನ್ನು ಕಲಿಸಿದಲ್ಲಿ ಮುಂದೆ ದೊಡ್ಡವರಾದಾಗ ಕೆಟ್ಟ ಅಭ್ಯಾಸಗಳು ಬೇರೂರುವುದಕ್ಕೆ ಅವಕಾಶವೇ ಇರುವುದಿಲ್ಲ. ಆಧುನಿಕ ವ್ಯವಹಾರಕ್ಕೆ ಅತ್ಯಾವಶ್ಯಕವಾಗಿ ಬೇಕಾಗಿರುವ ರಸ್ತೆಗಳ ನಿಬಂಧನೆ, ಸೈಕಲ್ ಸವಾರಿಮಾಡುವಾಗ ಅನುಸರಿಸಬೇಕಾದ ನಿಯಮಗಳು, ಬಸ್ಸು, ಮೋಟಾರು ಕಾರು, ರೈಲ್ವೆ ಮೊದಲಾದುವುಗಳಲ್ಲಿ ಪ್ರಯಾಣಮಾಡುವಾಗ ಅನುಸರಿಸಬೇಕಾದ ನಿಯಮ — ಇವೇ ಮೊದಲಾದುವುಗಳನ್ನು ಕಲಿಸುವುದಲ್ಲದೆ, ಮಕ್ಕಳು ಅವುಗಳನ್ನು ಆಚರಣೆಗೆ ತಂದು ಅವರಲ್ಲಿ ಈ ಅಭ್ಯಾಸಗಳು ಬಲಪಡುವಂತೆ ಮಾಡಬೇಕಾಗಿರುತ್ತದೆ. ಹೀಗೆ ಮಾಡಿದಲ್ಲಿ ಒಳ್ಳೆಯದನ್ನು ಮಾಡುವುದು, ಕೆಟ್ಟದನ್ನು ಬಿಡುವುದು — ಇವುಗಳು ತನ್ನಿಷ್ಟಿಗೆ ತಾನೆ ನಡೆಯುತ್ತಿರುವುವು. ಅಭ್ಯಾಸಗಳ ಅಧಿಕಾರವು ಮನುಷ್ಯರ ಮೇಲೆ ಅತಿಶಯವಾಗಿರುತ್ತದೆ. ಆದುದರಿಂದ ಒಳ್ಳೆಯ ಅಭ್ಯಾಸಗಳು ಚಿಕ್ಕವಯಸ್ಸಿನಲ್ಲಿ ಬಲವಾಗಿ ಬೇರೂರುವಂತೆ ಮಾಡಬೇಕು.[1]

ಒಳ್ಳೆಯ ಅಭ್ಯಾಸಗಳನ್ನು ಮಕ್ಕಳಿಗೆ ಕಲಿಸಲು ಶಾಲೆಯು ಅತ್ಯುತ್ತಮವಾದ ಸ್ಥಳವಾಗಿರುತ್ತದೆ. ಮಕ್ಕಳಿಗೆ ರಸ್ತೆ ಮೊದಲಾದುವುಗಳಿಗೆ ಸಂಬಂಧಪಟ್ಟ ನಿಬಂಧನೆಗಳನ್ನು ಕಲಿಸಿ ಅವುಗಳ ಜ್ಞಾನವು ಮತ್ತು ಆಚರಣೆಯು ಒಂದಾಗುವಂತೆ ಮಾಡಬೇಕು. ಅಲ್ಲದೆ ಆಗಾಗ್ಗೆ ಬುದ್ಧಿವಾದದ ಮೂಲಕವೂ, ಒಳ್ಳೆಯ ಆದರ್ಶಗಳ ಮೂಲಕವೂ, ಚಿತ್ರಪ್ರದರ್ಶನ ಮತ್ತು ಆಟಪಾಟಗಳ ಮೂಲಕವೂ ಒಳ್ಳೆಯ ಅಭ್ಯಾಸಗಳು ಬಲಪಡುವಂತೆ ಮಾಡಬೇಕು. ಈ ಶಿಕ್ಷಣವನ್ನು ಶಾಲೆಯಲ್ಲಿ ಪ್ರಾರಂಭಿಸಬೇಕು.[2] ಹೀಗೆ ಮಾಡುವುದರಿಂದ ಶಾಲೆಯಲ್ಲಿ ಓದುತ್ತಿರುವಾಗಲೂ, ಶಾಲೆಯನ್ನು ಬಿಟ್ಟು ಜೀವನ ಸಂಗ್ರಾಮದಲ್ಲಿ ಪಾತ್ರವನ್ನು ವಹಿಸಿದಾಗಲೂ ಈ ಅಭ್ಯಾಸಗಳನ್ನು ಆಚರಣೆಗೆ ತಂದು ಸುಖಪಡುವರು.

---

1 "Youth is the time to foster good habits."

2 "It is in the schools that Education in Road Sense must begin."

ಶಾಲೆಗಳಲ್ಲಿ ಈ ರೀತಿಯಾದ ಶಿಕ್ಷಣವನ್ನು ಕೊಡಲು ಪ್ರಾರಂಭಮಾಡಿದಲ್ಲಿ, ಹತ್ತಿಪ್ಪತ್ತು ವರ್ಷಗಳಲ್ಲಿ ಈ ನಿಬಂಧನೆಗಳು ಜನರಲ್ಲೆಲ್ಲಾ ಹರಡಲು ಸಂದೇಹವೇ ಇರುವುದಿಲ್ಲ. ಅಮೆರಿಕಾ ದೇಶದ ಕೆಲವು ಪಟ್ಟಣಗಳ ಮತ್ತು ಲಂಡನ್ ಪಟ್ಟಣದ ರಸ್ತೆ ಮೊದಲಾದುವುಗಳಲ್ಲಿ ಬಾಲಕರಿಗೆ ಸಂಭವಿಸಬಹುದಾದ ಆಕಸ್ಮಿಕ ಅಪಾಯ, ಮರಣಗಳ ಸಂಖ್ಯೆಯು ಕಡಮೆಯಾಗುತ್ತಿರುವುದಕ್ಕೆ ಶಾಲೆಗಳಲ್ಲಿ ಕೊಡಲ್ಪಡುತ್ತಿರುವ ಶಿಕ್ಷಣವೇ ಮುಖ್ಯ ಕಾರಣವಾಗಿರುತ್ತದೆ. ವಿದ್ಯಾಭ್ಯಾಸದ ಮುಖ್ಯೋದ್ದೇಶವು ಜನರು ಯೋಗ್ಯವಾದ ಮತ್ತು ಸುಖಕರವಾದ ಬದುಕನ್ನು ಮಾಡುವುದಕ್ಕೆ ಸಹಕಾರಿಯಾದ ಶಿಕ್ಷಣವನ್ನು ಒದಗಿಸುವುದಾಗಿರುತ್ತದೆ. ಆದುದರಿಂದ ಪ್ರಾಣರಕ್ಷಣೆಯ ಶಿಕ್ಷಣವು ವಿದ್ಯಾಭ್ಯಾಸದ ಒಂದು ಅಂಗವಾಗಿರುತ್ತದೆ. ವಿದ್ಯಾಭ್ಯಾಸದ ಇಲಾಖೆಯವರು ಈ ಶಿಕ್ಷಣಕ್ಕೆ ಅವಕಾಶವನ್ನು ಕಲ್ಪಿಸಬೇಕಾಗಿರುತ್ತದೆ.

ಪಾಶ್ಚಾತ್ಯ ದೇಶಗಳಲ್ಲಿ ಅವಿದ್ಯಾವಂತರಾಗಿರುವ ವಯಸ್ಕರ ವಿದ್ಯಾಭ್ಯಾಸಕ್ಕಾಗಿ ಅನೇಕ ಸೌಕರ್ಯಗಳನ್ನು ಏರ್ಪಡಿಸಿರುತ್ತಾರೆ. ಮಕ್ಕಳಿಗೆ ಕೊಡಲ್ಪಡುವಹಾಗೆ ಶಿಕ್ಷಣವನ್ನು ಕೊಟ್ಟು ಇವರನ್ನು ವಿದ್ಯಾವಂತರನ್ನಾಗಿ ಮಾಡಲು ಸಾಧ್ಯವಲ್ಲ. ಹೀಗಿದ್ದರೂ ಆಧುನಿಕ ವ್ಯವಹಾರಕ್ಕೆ ಅತ್ಯಾವಶ್ಯಕವಾಗಿ ಬೇಕಾಗಿರುವ ತಿಳಿವಳಿಕೆಯನ್ನು ಹೊಂದುವಂತೆ ಮಾಡಬೇಕಾಗಿರುವುದು ಪ್ರತಿ ಸರ್ಕಾರದ ಕರ್ತವ್ಯವಾಗಿರುತ್ತದೆ. ಸಿನೆಮಾ, ರೇಡಿಯೋ ಮೊದಲಾದುವುಗಳ ಮೂಲಕವೂ ಈ ಶಿಕ್ಷಣದ ಏರ್ಪಾಡುಗಳನ್ನು ಮಾಡಬಹುದಾಗಿರುತ್ತದೆ.

ಪ್ರತಿ ಮಾನವನೂ ಜೀವಂತನಾಗಿದ್ದು ಸುಖವಾಗಿ ಬಾಳಬೇಕೆಂದು ಆಶಿಸುತ್ತಿರುವನು. 'ಜೀವನ್ ಭದ್ರಾಣಿ ಪಶ್ಯತಿ'[1] ಎಂಬುದನ್ನು ಚೆನ್ನಾಗಿ ನೆನಪಿನಲ್ಲಿಡಬೇಕು. ರಸ್ಕಿನ್ ಎಂಬ ಮಹನೀಯನು ಹೀಗೆ ತಿಳಿಸಿರುತ್ತಾನೆ: "ಜೀವಂತನಾಗಿರುವುದೇ ಪರಮಭಾಗ್ಯ."[2] ಜೀವವಸ್ತುಗಳು

---

1 ಜೀವಂತನಾಗಿರುವ ಮಾನವನು ಮಾತ್ರ ಮಂಗಳವನ್ನು ಅನುಭವಿಸುವನು (ನೋಡುತ್ತಾನೆ).

2 "There is no wealth but life."

(ಮುಖ್ಯವಾಗಿ ಮನುಷ್ಯರು) ದೇಶದ ಬೆನ್ನುಮೂಳೆಯೋಪಾದಿಯಲ್ಲಿರುತ್ತವೆ. ಹೀಗಿರುವುದರಿಂದ ಎಷ್ಟೇ ಖರ್ಚಾದರೂ ದೇಶದ ಜನರು ಸುಖವಾಗಿ ಬಾಳುವುದಕ್ಕೆ ಬೇಕಾದ ಸೌಕರ್ಯಗಳನ್ನು ಸರ್ಕಾರದವರು ಏರ್ಪಡಿಸಬೇಕಾಗಿರುತ್ತದೆ. ಪ್ರಜೆಗಳ ಪ್ರಾಣರಕ್ಷಣೆಯು ಪ್ರತಿ ರಾಷ್ಟ್ರದ ಮುಖ್ಯ ಕರ್ತವ್ಯವಾಗಿರುತ್ತದೆ. ಈಚೆಗೆ ರಸ್ತೆ ಮೊದಲಾದುವುಗಳಲ್ಲಿ ಹೋಗುತ್ತಿರುವ ಚಿಕ್ಕಮಕ್ಕಳ ಪ್ರಾಣರಕ್ಷಣೆಯ ಸಮಸ್ಯೆಯಂತೂ ಅತಿ ಮಹತ್ತರವಾಗಿರುತ್ತದೆ. ಮನೆಯಲ್ಲಾಗಲೀ ಅಥವಾ ಹೊರಗಡೆಯಲ್ಲಾಗಲೀ ಆಧುನಿಕ ವಾತಾವರಣದಲ್ಲಿ ಸಂಭವಿಸಬಹುದಾದ ಅಪಾಯ ಮೊದಲಾದುವುಗಳನ್ನು ಜಾಗರೂಕತೆಯಿಂದಲೂ, ವಿವೇಕದಿಂದಲೂ ತಪ್ಪಿಸಿಕೊಳ್ಳುವುದನ್ನು ಪ್ರತಿ ಗಂಡಸು, ಹೆಂಗಸು, ಮಗು ಕಲಿಯಬೇಕಾಗಿರುತ್ತದೆ.

ಗ್ರೇಟ್ ಬ್ರಿಟನ್ ಮತ್ತು ಅಮೆರಿಕಾ ದೇಶಗಳಲ್ಲಿ "ಪ್ರಾಣರಕ್ಷಣೆಯ ಸಂಘಗಳು" ಸ್ಥಾಪಿಸಲ್ಪಟ್ಟಿರುತ್ತವೆ. ಗ್ರೇಟ್ ಬ್ರಿಟನ್ನಿನ ರಾಷ್ಟ್ರೀಯ ಪ್ರಾಣರಕ್ಷಣೆಯ ಸಂಘವು ಮಾದರಿಯಾಗಿರುತ್ತದೆ. ಇಂಡಿಯಾ ದೇಶದಲ್ಲಿಯೂ ಸಹ ಇಂತಹ ಸಂಘವು ಅತ್ಯಾವಶ್ಯಕವೆಂದು ಹೇಳಬೇಕಾಗಿಯೇ ಇಲ್ಲ.

1931ನೆಯ ಇಸವಿಯಲ್ಲಿ ಬೊಂಬಾಯಿ ಪುರಪ್ರಮುಖರಲ್ಲಿ ಕೆಲವರು ಸಭೆ ಸೇರಿ ಪ್ರತಿ ವರ್ಷವೂ ಹೆಚ್ಚುತ್ತಿರುವ ಆಕಸ್ಮಿಕ ಅಪಾಯ, ಮರಣ ಮೊದಲಾದುವುಗಳ ಕಾರಣಗಳನ್ನು ಚರ್ಚಿಸಿ, ಪ್ರಾಣರಕ್ಷಣೆಯ ಸಂಘವೊಂದು ಅತ್ಯಾವಶ್ಯಕವೆಂದು ತೀರ್ಮಾನಿಸಿದರು. ಈ ತೀರ್ಮಾನದ ಫಲವಾಗಿ 1932ನೆಯ ಇಸವಿ ಅಕ್ಟೋಬರ್ 8ನೆಯ ತಾರೀಖಿನ ದಿವಸ "ಇಂಡಿಯಾ ದೇಶದ ಪ್ರಾಣರಕ್ಷಣೆಯ ಸಂಘ" ಎಂಬುದು ಸ್ಥಾಪಿಸಲ್ಪಟ್ಟಿತು. ಇಂಡಿಯಾ ದೇಶದ 1913ನೆಯ ಇಸವಿ ಕಂಪನಿಗಳ ಆಕ್ಟ್ ಪ್ರಕಾರ ಈ ಸಂಘವು ಬೊಂಬಾಯಿ ಸರ್ಕಾರದವರಿಂದ ಅಂಗೀಕರಿಸಲ್ಪಟ್ಟಿರುತ್ತದೆ. ಈ ಸಂಘದವರು, ಈ ಸಂಘದ ಉದ್ದೇಶ, ಸದಸ್ಯರ ಅರ್ಹತೆ, ಜವಾಬ್ದಾರಿ ಮೊದಲಾದುವುಗಳನ್ನೊಳಗೊಂಡಿರುವ ಒಂದು ಪುಸ್ತಕವನ್ನು

ಪ್ರಕಟಿಸಿರುತ್ತಾರೆ.[1] ಈ ಸಂಘದ ಮುಖ್ಯೋದ್ದೇಶಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ತಿಳಿಸಿದೆ:—

1. ಆಕಸ್ಮಿಕ ಅಪಾಯ, ಮರಣ ಮೊದಲಾದುವು ಹೇಗೆ ಸಂಭವಿಸುವುವು, ಇವುಗಳನ್ನು ತಡೆಯುವುದು ಹೇಗೆ, ಮನೆಯಲ್ಲಿಯೂ, ಕಾರ್ಖಾನೆ ಮೊದಲಾದುವುಗಳಲ್ಲಿಯೂ ಯಾವ ಅಪಾಯಕ್ಕೂ ಒಳಗಾಗದೆ ಸುರಕ್ಷಿತವಾಗಿ ಕೆಲಸಮಾಡುವುದು ಹೇಗೆ— ಇವೇ ಮೊದಲಾದುವುಗಳನ್ನು ವರ್ತಮಾನಪತ್ರಿಕೆ, ಪ್ರಸಿದ್ಧಪತ್ರಿಕೆ, ರೇಡಿಯೋ ಮೊದಲಾದ ಸಾಧನಗಳ ಮೂಲಕ ಜನರಿಗೆ ತಪ್ಪದೆ ಪ್ರಚುರಪಡಿಸುವುದು.

2. ಪ್ರಕಟನಾಪತ್ರಿಕೆಗಳನ್ನು (Posters) ಪ್ರಕಟಿಸುವುದು.

3. ಪುಸ್ತಕಗಳನ್ನು ಪ್ರಕಟಿಸುವುದು.

4. ಆಕಸ್ಮಿಕ ಮರಣಗಳ ಸಂಖ್ಯೆಯನ್ನು ಕಡಮೆಮಾಡುವುದಕ್ಕೆ ಸಹಕಾರಿಯಾದ ಪ್ರಾಣರಕ್ಷಣೆಯ ತತ್ವಗಳನ್ನು ಜನರಿಗೆ ತಿಳಿಸುವುದಕ್ಕೋಸ್ಕರ ಉಪನ್ಯಾಸಗಳನ್ನು ಏರ್ಪಡಿಸುವುದು.

5. ಶಾಲೆಗಳಲ್ಲಿ ಇದರ ಶಿಕ್ಷಣಕ್ಕೆ ಅವಕಾಶವನ್ನು ಕಲ್ಪಿಸುವುದು.

6. ಆಗಾಗ್ಗೆ ಸಮ್ಮೇಳನಗಳನ್ನೂ ಮತ್ತು ಪ್ರತಿ ವರ್ಷ 'ಪ್ರಾಣರಕ್ಷಣೆ'ಯ ವಾರಗಳನ್ನೂ ಏರ್ಪಡಿಸುವುದು.

7. ಚಲನಚಿತ್ರಗಳನ್ನು ಪ್ರದರ್ಶಿಸುವುದು.— ಸುರಕ್ಷಿತವಾಗಿ ಸೈಕಲ್ ಸವಾರಿಮಾಡುವುದು, ಸುರಕ್ಷಿತವಾಗಿ ಮೋಟಾರು ವಾಹನಗಳನ್ನು ನಡೆಯಿಸುವುದು, ಹೈವೇ ಕೋಡ್— ಇವುಗಳಿಗೆ ಸಂಬಂಧಪಟ್ಟ ಚಲನಚಿತ್ರಗಳು ಸಿದ್ಧಪಡಿಸಲ್ಪಟ್ಟು ಉಪಯೋಗದಲ್ಲಿವೆ.

ಈ ಸಂಘವು ಅನಿರ್ಬಂಧವಾದುದೂ (Voluntary), ರಾಜಕೀಯವಲ್ಲದುದೂ (Non-political), ಜಾತಿ ಕೋಮುವಾರುಗಳಿಗೆ ಸಂಬಂಧವಿಲ್ಲದುದೂ (Non-communal), ಲಾಭ ಪಡೆಯಬೇಕೆಂಬ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಸಂಸ್ಥೆಯಾಗಿರದೆಯೂ (Non-commercial Organisation) ಆಗಿರುತ್ತದೆ. ಕೇವಲ ವ್ಯಾವಹಾರಿಕವಾದ ಮತ್ತು ಪರೋಪಕಾರ ದೃಷ್ಟಿಯುಳ್ಳ ಆಧುನಿಕ ವಿಶ್ವಚಳುವಳಿಗಳಲ್ಲಿ ಇದು ಒಂದಾಗಿರುತ್ತದೆ.

[1] Memorandum of Association of the Safety First Association of India with Articles of Association.

ಇದರ ಮುಖ್ಯೋದ್ದೇಶವು ಪ್ರತಿ ಗಂಡಸು, ಹೆಂಗಸು, ಮಗು ಇವರನ್ನು ಸದಾ ಎಚ್ಚರಿಕೆಯುಳ್ಳವರನ್ನಾಗಿ ಮಾಡಿ, ಅವರಿಗೂ ಇತರರಿಗೂ ಆಕಸ್ಮಿಕ ಅಪಾಯ ಮೊದಲಾದುವುಗಳು ಸಂಭವಿಸದಂತೆ ಮಾಡು ವುದಾಗಿರುತ್ತದೆ. ಆದುದರಿಂದ ಇಂತಹ ಸಂಘದ ಶಾಖೋಪಶಾಖೆ ಗಳನ್ನು ದೇಶದಲ್ಲೆಲ್ಲಾ ಸ್ಥಾಪಿಸಬೇಕಾದುದು ಆವಶ್ಯಕವಾಗಿರುತ್ತದೆ. **"ಈಗಿನ ಮಗುವು ನಾಳೆಯ ವಯಸ್ಕನಾದ ಪಾದಚಾರಿ";** ಅವನ ನಡತೆ ಮತ್ತು ಅಭ್ಯಾಸಗಳು ಚಿಕ್ಕಬಾಲಕರಿಗೆ ಮಾದರಿಯಾಗಿ ಪರಿಣಮಿಸ ಬೇಕಾಗಿರುತ್ತದೆ. ಆದುದರಿಂದ ಇದರ ಶಿಕ್ಷಣವು ಶಾಲೆಗಳಲ್ಲಿ ಆವಶ್ಯಕ. ಕೇವಲ ತಾತ್ವಿಕ ಶಿಕ್ಷಣದಿಂದ ಹೆಚ್ಚು ಪ್ರಯೋಜನವಾಗಲಾರದು; ವ್ಯವಹಾರಕ್ಕೆ ಉಪಯೋಗವಾಗುವಂತೆ ಶಿಕ್ಷಣವನ್ನು ಏರ್ಪಡಿಸಬೇಕು.

ಈ ಸಂಘದವರು ಫಲಾಪೇಕ್ಷೆಯಿಲ್ಲದೆ ಜನರಿಗಾಗಿ ಮಾಡುತ್ತಿರುವ ಸೇವೆಯು ಸ್ತೋತ್ರಾರ್ಹವಾಗಿರುತ್ತದೆ. ಪ್ರತಿ ವರ್ಷದ ಅಂತ್ಯದಲ್ಲಿ ಇವರು ಪ್ರಚುರಪಡಿಸುತ್ತಿರುವ ವರದಿಯಿಂದ ಈ ಸಂಘದ ಕೆಲಸದ ಮಹತ್ವವನ್ನು ತಿಳಿಯಬಹುದು.

ಈ ಸಂಘದ ಉದ್ದೇಶವು ಸಂಪೂರ್ಣವಾಗಿ ನೆರವೇರಬೇಕಾದರೆ ಸರ್ಕಾರದವರ ಮತ್ತು ಸ್ಥಳೀಯ ಸಂಸ್ಥೆಗಳವರ (ಮ್ಯುನ್ಸಿಪಾಲಿಟಿ, ಡಿಸ್ಟ್ರಿಕ್ಟ್ ಬೋರ್ಡ್) ಸಹಕಾರವು ಅತ್ಯಾವಶ್ಯಕವಾಗಿರುತ್ತದೆ. ಒಳ್ಳೆಯ ರಸ್ತೆಗಳು, ಕಾಲುದಾರಿಗಳು, ಎಚ್ಚರಿಕೆ ಮೊದಲಾದುವುಗಳನ್ನು ಸೂಚಿಸುವ ಬೋರ್ಡುಗಳು, ಈ ಸೌಕರ್ಯಗಳನ್ನು ಇವರು ಏರ್ಪಡಿಸಬೇಕಾಗಿರು ತ್ತದೆ. ಅಶ್ರದ್ಧೆಯಿಂದ ಪ್ರವರ್ತಿಸತಕ್ಕ ಮತ್ತು ಉದಾಸೀನರಾದ ಪಾದಚಾರಿಗಳನ್ನು ಶಿಕ್ಷೆಮಾಡುವುದಕ್ಕೆ ಸರಿಯಾದ ಕಾನೂನುಗಳನ್ನು ಮಾಡುವ ಜವಾಬ್ದಾರಿಯು ಸರ್ಕಾರದವರಿಗೆ ಸೇರಿರುತ್ತದೆ.

'ಪ್ರಾಣರಕ್ಷಣೆ'ಯ ವಿಷಯವನ್ನು ಪಾಠಶಾಲೆಗಳ ಪಠ್ಯ ವಿಷಯ ಗಳಲ್ಲಿ ಹೇಗೆ ಸೇರಿಸಬೇಕೆಂಬುದನ್ನು ವಿಚಾರಮಾಡಬೇಕು. ಈ ವಿಷಯವು ಅತ್ಯಂತ ಮುಖ್ಯವಾಗಿರುವುದರಿಂದ ಇತರ ಪ್ರತ್ಯೇಕ ಪಾಠ ವಿಷಯಗಳ ಹಾಗೆ (ಗಣಿತ, ಚರಿತ್ರೆ, ಭೂಗೋಳ, ಭಾಷೆ) ಇವನ್ನು ಪ್ರತ್ಯೇಕ ಪಾಠ ವಿಷಯವನ್ನಾಗಿ ಕಲಿಸಬೇಕು. ವೇಳಾಪತ್ರಿಕೆಯಲ್ಲಿ ಇದಕ್ಕೋಸ್ಕರ

ವಾರಕ್ಕೆ ಒಂದು ಘಂಟೆಯಾದರೂ ಅವಕಾಶವಿರಬೇಕು. ಅಲ್ಲದೆ ಇತರ ಪಾಠ ವಿಷಯುಗಳನ್ನು ಕಲಿಸುವಾಗಲೂ ಸಾಧ್ಯವಾದಷ್ಟು ಈ ವಿಷಯವನ್ನು ಸಂಬಂಧಿಸಿಕೊಂಡು ಕಲಿಸಬಹುದು. ಭೂಗೋಳ ಪಾಠವನ್ನು ಕಲಿಸ ತಕ್ಕವರು ಇದಕ್ಕೆ ಸಂಬಂಧಪಟ್ಟ ಕೆಲವು ವಿಷಯುಗಳನ್ನು ತಿಳಿಸಬಹುದು; 'ಸಂಚಾರ ಸೌಕರ್ಯಗಳು' ಎಂಬ ಅಧ್ಯಾಯಕ್ಕೆ ಈ ವಿಷಯುದ ಕೆಲವು ಭಾಗಗಳು ಸಂಬಂಧಿಸಿರುತ್ತವೆ; ಉದಾಹರಣೆಗಾಗಿ, ಆಧುನಿಕ ಕಾಲದ ರಸ್ತೆಗಳಿಗಿಂತಲೂ ಸುಮಾರು 30 ಅಥವಾ 40 ವರ್ಷಗಳ ಕಾಲದ ರಸ್ತೆಗಳು ಸುಖಕರವಾಗಿದ್ದುವು ಎಂಬುದು ಸಂಚಾರ ಸೌಕರ್ಯಗಳಿಗೆ ಸಂಬಂಧಿಸಿರುತ್ತದೆ. ಚರಿತ್ರೆಯ ಪಾಠವನ್ನು ಹೇಳುವಾಗ ಈ ವಿಷಯು ವನ್ನು ಸಂಬಂಧಿಸಿಕೊಂಡು ಕೆಲವು ವಿಷಯುಗಳನ್ನು ಕಲಿಸಬಹುದು. ಉದಾಹರಣೆಗಾಗಿ, ರಾಜ್ಯಭಾರವನ್ನು ವರ್ಣಿಸುವಾಗ, ರಾಜರ ಕರ್ತವ್ಯ ಗಳಾವುವು ಎಂಬುದನ್ನು ತಿಳಿಸುವಾಗ, ಪ್ರಜೆಗಳ ಕರ್ತವ್ಯಗಳಾವುವು ಎಂಬುದನ್ನು ತಿಳಿಸುವಾಗ ಪ್ರಾಣರಕ್ಷಣೆಗೆ ಸಂಬಂಧಪಟ್ಟ ಕೆಲವು ಅಂಶಗಳನ್ನು ಕಲಿಸಬಹುದು. ಆರೋಗ್ಯಶಾಸ್ತ್ರಕ್ಕೂ, ಈ ವಿಷಯಕ್ಕೂ ನಿಕಟ ಸಂಬಂಧವಿರುತ್ತದೆ. ಅಂಕಗಣಿತವನ್ನು ಬೋಧಿಸುವಾಗ ವ್ಯವ ಹಾರಕ್ಕೆ ಸಂಬಂಧಪಟ್ಟ ಕೆಲವು ವಿಷಯುಗಳನ್ನು (ರೈಲ್ವೆ ಛಾರ್ಜು, ಬಸ್ಸು ಛಾರ್ಜು— ಇವುಗಳನ್ನು ಕಂಡುಹಿಡಿಯುವುದು, ದೂರ ಮತ್ತು ಕಾಲ ಇವುಗಳನ್ನು ಕಂಡುಹಿಡಿಯುವುದು ಇವೇ ಮೊದಲಾದುವು) ಕಲಿಸ ಬಹುದು. ವಿಜ್ಞಾನಶಾಸ್ತ್ರಗಳನ್ನು ಬೋಧಿಸುವಾಗ ಅವುಗಳ ಯಾವ ತತ್ವಗಳನ್ನು ಅನ್ವಯಿಸಿ ಜೀವನಕ್ಕೆ ಬೇಕಾದ ಸಾಮುಗ್ರಿ ಮೊದಲಾದು ವುಗಳನ್ನು ಕಲ್ಪಿಸಿರುತ್ತಾರೆಂಬುದನ್ನೂ, ಅವುಗಳ ದುರುಪಯೋಗದಿಂದ ಯಾವ ಅಪಾಯಗಳು ಸಂಭವಿಸಬಹುದೆಂಬುದನ್ನೂ ಕಲಿಸಬಹುದು. ಶಾಲೆಗಳಲ್ಲಿ ಪ್ರಾಣರಕ್ಷಣೆಯ ವಿಷಯದಲ್ಲಿ ಉಪನ್ಯಾಸಗಳನ್ನು ಕೊಟ್ಟರೆ ಸಾಲದು. ಶಾಲೆಯ ವಾತಾವರಣವೆಲ್ಲಾ ಪ್ರಾಣರಕ್ಷಣೆಯ ಭಾವನೆ ಗಳಿಂದ ತುಂಬಿ ತುಳುಕುತ್ತಿರಬೇಕು.

ಕೆಲವು ಸಂಸ್ಥಾನಗಳಲ್ಲಿ ಈ ಶಿಕ್ಷಣವು ಪ್ರಾಥಮಿಕ ಶಾಲೆಗಳಲ್ಲಿ ಪ್ರಾರಂಭಿಸಲ್ಪಟ್ಟಿರುತ್ತದೆ. ತಿರುವಾಂಕೂರು ಸಂಸ್ಥಾನದಲ್ಲಿ 3 ವರ್ಷಗಳ

ಹಿಂದೆಯೇ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಣರಕ್ಷಣೆಯ ಶಿಕ್ಷಣವನ್ನು ನಿರ್ಬಂಧವಾಗಿ ಕೊಡಲು ಪ್ರಾರಂಭಿಸಿದರೆಂದು ತಿಳಿದುಬಂದಿದೆ. ನಮ್ಮ ಸಂಸ್ಥಾನದಲ್ಲಿಯೂ ಸಹ 1936ನೆಯ ಇಸವಿಯಲ್ಲಿ "ಪ್ರಾಣರಕ್ಷಣೆಯು ಪ್ರಥಮ" ಎಂಬ ಕನ್ನಡ ಪುಸ್ತಕವನ್ನು ಪ್ರಾಥಮಿಕ ಶಾಲೆಯ 4ನೆಯ ತರಗತಿಗೆ ಪಠ್ಯಪುಸ್ತಕವನ್ನಾಗಿ ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರವರು ಮಂಜೂರು ಮಾಡಿದರು.[1] ಈಗಲೂ ಸಹ ಇದು ಪಠ್ಯ ವಿಷಯಗಳಲ್ಲಿ ಒಂದಾಗಿರುತ್ತದೆ.

ಪ್ರಾಣರಕ್ಷಣೆಯ ಶಿಕ್ಷಣವು ಅನೇಕ ವಿಷಯಗಳನ್ನು ಒಳಗೊಂಡಿರುತ್ತದೆ. ಇಲ್ಲಿ ಮುಖ್ಯವಾದುವುಗಳನ್ನು ಮಾತ್ರ ತಿಳಿಸಿದೆ:—

1. ರಸ್ತೆಗಳಲ್ಲಿ ಸುರಕ್ಷಿತವಾಗಿ ನಡೆಯುವುದು ಹೇಗೆ?

2. ಸುರಕ್ಷಿತವಾಗಿ ಸೈಕಲ್ ಸವಾರಿಮಾಡುವುದು ಹೇಗೆ?

3. ಸುರಕ್ಷಿತವಾಗಿ ಮೋಟಾರು ಕಾರು, ಬಸ್ಸು, ರೈಲ್ವೆ ಮೊದಲಾದುವುಗಳಲ್ಲಿ ಪ್ರಯಾಣಮಾಡುವುದು ಹೇಗೆ?

4. ಮನೆಗಳಲ್ಲಿ ಯಾವ ವಿಧವಾದ ಆಕಸ್ಮಿಕ ಅಪಾಯ ಮೊದಲಾದುವುಗಳಿಗೆ ಗುರಿಯಾಗದೆ ಆಧುನಿಕ ಜೀವನವನ್ನು ಸುಖವಾಗಿ ನಡೆಯಿಸಿಕೊಂಡುಹೋಗುವುದು ಹೇಗೆ?

5. ನೀರಿನಿಂದ ಅಪಾಯವಾಗದಂತೆ ಕಾಪಾಡಿಕೊಳ್ಳುವುದು ಹೇಗೆ?

6. ಪಟ್ಟಣಗಳಲ್ಲಿ ಶಾಲೆಗೆ ಹೋಗುವ ಮಕ್ಕಳಿಗೆ ಯಾವ ಅಪಾಯವೂ ಆಗದಂತೆ ನೋಡಿಕೊಳ್ಳುವುದು ಹೇಗೆ?

7. ಪ್ರಾಣರಕ್ಷಣೆಯ ಸಂಘದ ಉದ್ದೇಶಗಳು ನೆರವೇರಬೇಕಾದರೆ ಯಾವ ಯಾವ ಸಂಸ್ಥೆಗಳ ಸಹಕಾರವು ಅತ್ಯಾವಶ್ಯಕ?

[1] Notification No. D. 115-32, T.B.C. o. 35-36, dated 11th June 1936, from the Director of Public Instruction in Mysore, Bangalore.

# ಒಂದನೆಯ ಅಧ್ಯಾಯ

## ಸುರಕ್ಷಿತವಾಗಿ ನಡೆಯುವುದು (Safe Walking)

ಸುಮಾರು 50 ವರ್ಷಗಳ ಹಿಂದೆ ರಸ್ತೆ ಮೊದಲಾದುವುಗಳಲ್ಲಿ ನಡೆಯುವುದು ಈಗಿನಷ್ಟು ಅಪಾಯಕರವಾಗಿದ್ದಿಲ್ಲ. ಆಗಿನ ಕಾಲದಲ್ಲಿ ನಿಧಾನವಾಗಿ ಹೋಗುತ್ತಿದ್ದ ವಾಹನಗಳು (ಎತ್ತಿನ ಗಾಡಿ, ಕುದುರೆ ಗಾಡಿ ಮೊದಲಾದುವು) ಹೆಚ್ಚಾಗಿದ್ದುವು. ಕಾಲುದಾರಿಗಳು (Foot-paths) ಇರಲೇ ಇಲ್ಲ. ವಾಹನಗಳು ಮತ್ತು ಪಾದಚಾರಿಗಳು ಒಂದೇ ರಸ್ತೆಯಲ್ಲಿ ಸುಖವಾಗಿ ಸಂಚಾರಮಾಡಬಹುದಾಗಿದ್ದಿತು.

20ನೆಯ ಶತಮಾನದ ಪ್ರಾರಂಭದಲ್ಲಿ ಬೀದಿಗಳಲ್ಲಿ ಜಾಗ್ರತೆಯಾಗಿ ಸಂಚಾರಮಾಡುವ ಮೋಟಾರು ಕಾರು, ಬಸ್ಸು ಮೊದಲಾದುವುಗಳು ಕಾಣಿಸಿಕೊಂಡವು. ಬ್ರಿಟಿಷ್ ಇಂಡಿಯಾದಲ್ಲಿ ಸದ್ಯಃ 1,50,000 ಮೋಟಾರು ವಾಹನಗಳು ಇವೆಯೆಂದು ಗೊತ್ತಾಗಿದೆ.

ಸದ್ಯಃ ಈ ವಾಹನಗಳು ನಮ್ಮ ಮೈಸೂರು ದೇಶದಲ್ಲಿ (ಮೋಟಾರು ಕಾರುಗಳು 2,249, ಬಸ್ಸುಗಳು 570, ಮೋಟಾರು ಸೈಕಲ್ಲುಗಳು 386, ಮೋಟಾರು ಲಾರಿಗಳು 347, ಟ್ಯಾಕ್ಸಿಗಳು 85) ಇವೆಯೆಂದು ತಿಳಿದು ಬಂದಿದೆ. ಇವುಗಳು ಹೆಚ್ಚಾಗುತ್ತಿರುವುದರಿಂದ ಎತ್ತಿನ ಗಾಡಿಗಳ ಸಂಖ್ಯೆಯು ಕಡಮೆಯಾಗುತ್ತಿರುವುದು. ಎತ್ತಿನ ಗಾಡಿ, ಕುದುರೆ ಗಾಡಿ, ಮೊದಲಾದುವುಗಳು ಮುಖ್ಯವಾಗಿ ಸಂಚಾರಮಾಡುತ್ತಿದ್ದಾಗ ಆಕಸ್ಮಿಕ ಅಪಾಯ, ಮರಣ ಮೊದಲಾದುವುಗಳ ಸಂಖ್ಯೆಯು ಕಡಮೆಯಾಗಿದ್ದಿತು. ಮೋಟಾರು ವಾಹನಗಳು ಜಾಗ್ರತೆಯಾಗಿ ಹೋಗುತ್ತಿರುವುದರಿಂದ, ಇದಕ್ಕನುಸಾರವಾಗಿ ನಡೆಯುವ ಹೊಸ ಅಭ್ಯಾಸಗಳನ್ನು ಕಲಿಯುವ ವಿನಾ ಜನಗಳು ಸುರಕ್ಷಿತವಾಗಿ ನಡೆಯುವಹಾಗಿಲ್ಲ. ಅಗಲವಾದ ರಸ್ತೆಗಳನ್ನು ಸಾಧ್ಯವಿರುವಲ್ಲಿ ಮಾಡುವುದು, ರಸ್ತೆಗಳ ಎಡ ಬಲ ಭಾಗಗಳಲ್ಲಿ ಕಾಲುದಾರಿಗಳನ್ನು ಏರ್ಪಡಿಸುವುದು, ಈ ದಾರಿಗಳಲ್ಲಿ ಯಾವ ಅಡಚಣೆಯೂ ಇಲ್ಲದಂತೆ ನೋಡಿಕೊಳ್ಳುವುದು, ಇವೇ ಮೊದಲಾದುವುಗಳನ್ನು ಸರ್ಕಾರದವರು ಮತ್ತು ಇತರ ಸಂಸ್ಥೆಗಳವರು ಮಾಡಬೇಕಾಗಿರುತ್ತದೆ.

ಹೊಸದಾಗಿ ಗ್ರಾಮಗಳ ಅಕ್ಕಪಕ್ಕಗಳನ್ನು ಅಭಿವೃದ್ಧಿಪಡಿಸುವಾಗ ರಸ್ತೆ ಮೊದಲಾದುವುಗಳ ನಿಬಂಧನೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಏರ್ಪಾಡುಗಳನ್ನು ಮಾಡಬೇಕಾಗಿರುತ್ತದೆ. ಒಂದುವೇಳೆ ಇವೆಲ್ಲವೂ ಸಮರ್ಪಕವಾಗಿದ್ದರೂ ಜನರು ಅವಿದ್ಯಾವಂತರಾಗಿರುವಲ್ಲಿ ಸರಿಯಾಗಿ ನಡೆಯುವ ಕ್ರಮವು ಗೊತ್ತಿಲ್ಲದೆ ಅಪಾಯಗಳಿಗೆ ಈಡಾಗಬಹುದು. ಇದನ್ನು ತಪ್ಪಿಸಿಕೊಳ್ಳಬೇಕಾದರೆ ವಿದ್ಯಾಭ್ಯಾಸದ ಮೂಲಕ ಮಾತ್ರ ಸಾಧ್ಯ.

ಈಚೆಗೆ ರಸ್ತೆಗಳಲ್ಲಿ ಅನೇಕ ಅಪಾಯಗಳಿಗೆ ಗುರಿಯಾಗಿ ಕೈ ಕಾಲುಗಳನ್ನು ಮುರಿದುಕೊಂಡು ಕಷ್ಟಪಡುತ್ತಿರುವವರ ಸಂಖ್ಯೆಯೂ ಮತ್ತು ಪ್ರಾಣಗಳನ್ನು ಕಳೆದುಕೊಳ್ಳುವವರ ಸಂಖ್ಯೆಯೂ ಹೆಚ್ಚುತ್ತಿರುವುದು. ಆದುದರಿಂದ ಅಪಾಯಕ್ಕೆ ಗುರಿಯಾಗದೆ ಸುಖವಾಗಿ ನಡೆಯತಕ್ಕ ಕ್ರಮವನ್ನು ತಿಳಿದುಕೊಂಡು ಅದರಂತೆ ಅಭ್ಯಾಸಮಾಡಬೇಕಾಗಿರುವುದು ಅವಶ್ಯಕವಾಗಿರುತ್ತದೆ. ವಾಹನಗಳ ಸಂಚಾರಕ್ಕೆ ಪ್ರತ್ಯೇಕವಾದ ರಸ್ತೆಗಳು, ಜನಗಳು ನಡೆಯುವುದಕ್ಕೆ ಪ್ರತ್ಯೇಕವಾದ ರಸ್ತೆಗಳು ಇರುವಲ್ಲಿ ಹೆಚ್ಚು ಅನಾಹುತಗಳಿಗೆ ಅವಕಾಶವೇ ಇರುವುದಿಲ್ಲ. ಇಂತಹ ಸ್ಥಿತಿಯು ಅನೇಕ ಕಾರಣಗಳಿಂದ ಸದ್ಯಃ ಅಸಾಧ್ಯವೆಂದೇ ಹೇಳಬೇಕಾಗಿದೆ; ಕನಸೆಂದು ಹೇಳಿದಲ್ಲಿ ತಪ್ಪಾಗಲಾರದು. ಸದ್ಯದ ಸ್ಥಿತಿಯಲ್ಲಿ ಕೆಲವು ಪ್ರದೇಶಗಳಲ್ಲಿ ವಾಹನಗಳು ಹೋಗುವುದಕ್ಕೂ, ಬರುವುದಕ್ಕೂ ಬೇಕಾದಷ್ಟು ಜಾಗವನ್ನು ಬಿಟ್ಟು ಕಾಲುದಾರಿಗಳನ್ನು ಮಾಡಲು ಸಾಧ್ಯವಿರುವುದಿಲ್ಲ; ಸ್ಥಳದ ಸಂಕೋಚ ಮತ್ತು ದ್ರವ್ಯದ ಅಭಾವ, ಇವು ಮುಖ್ಯ ಕಾರಣಗಳಾಗಿರುತ್ತವೆ.

**I. ರಸ್ತೆಯ ಅಕ್ಕಪಕ್ಕಗಳಲ್ಲಿ ಕಾಲುದಾರಿಗಳು ಇರುವಾಗ ಹೇಗೆ ನಡೆಯಬೇಕು?**

1. ಕಾಲುದಾರಿಗಳು ಇರುವಲ್ಲಿ ಯಾವಾಗಲೂ ಪಾದಚಾರಿಗಳು ಅಲ್ಲಿಯೇ ನಡೆಯುವುದನ್ನು ಅಭ್ಯಾಸಮಾಡಬೇಕು.

2. ಕಾಲುದಾರಿಗಳಿರುವ ರಸ್ತೆಗಳಲ್ಲಿ ಬಲ ಭಾಗದ ಕಾಲುದಾರಿಯಲ್ಲಿ ವಾಹನಗಳನ್ನು ಎದುರುನೋಡುತ್ತಾ ಎಡಗಡೆ ನಡೆಯಬೇಕು. (ಚಿತ್ರ 1)

3. ಕಾಲುದಾರಿಯನ್ನು ಶೀಘ್ರವಾಗಿ ದಾಟಲು ಎಂದಿಗೂ ಯತ್ನಿಸಬಾರದು.



ಚಿತ್ರ 1

4. ಕಾಲುದಾರಿಯಲ್ಲಿ ಅಕ್ಕಪಕ್ಕಗಳಲ್ಲಿ ಹಾಕಿರುವ ಕಲ್ಲಿನಮೇಲೆ ಎಂದಿಗೂ ಅಡ್ಡಾಡಬಾರದು.

5. ಛತ್ರಿಗಳನ್ನು ಎತ್ತರವಾಗಿ ಹಿಡಿದುಕೊಂಡು, ನಡೆದುಹೋಗುವವರ ಕಣ್ಣುಗಳಿಗೆ ಅಪಾಯವಾಗದಂತೆ ನೋಡಿಕೊಳ್ಳಬೇಕು.

6. ಹಣ್ಣಿನ ಸಿಪ್ಪೆಗಳನ್ನಾಗಲೀ ಅಥವಾ ಸಣ್ಣಕಲ್ಲುಗಳನ್ನಾಗಲೀ ಕಾಲುದಾರಿಗಳಲ್ಲಿ ಹಾಕಬಾರದು. ಹೀಗೆ ಹಾಕುವುದರಿಂದ ಅನೇಕವೇಳೆ ಅಪಾಯವಾಗಬಹುದು.

7. ಇವುಗಳಿಗೋಸ್ಕರ ಏರ್ಪಡಿಸಿರುವ ಕಸದ ಡಬ್ಬಗಳಲ್ಲಿ ಮಾತ್ರ ಇವುಗಳನ್ನು ಹಾಕಬೇಕು. ಒಂದುವೇಳೆ ನಡೆದುಹೋಗುವವರು ಅಜಾಗರೂಕತೆಯಿಂದಲೋ, ಶಿಸ್ತಿನ ನಿಬಂಧನೆಗಳನ್ನು ತಿಳಿಯದಿರುವುದರಿಂದಲೋ ದಾರಿಗಳಲ್ಲಿ ಇವುಗಳನ್ನು ಹಾಕಿದರೆ, ಅವುಗಳನ್ನು ಆರಿಸಿ ಡಬ್ಬಗಳಲ್ಲಿಯಾಗಲೀ (ಇರುವಲ್ಲಿ) ಅಥವಾ ಅಪಾಯವಾಗದಿರುವ ಸ್ಥಳಗಳಲ್ಲಿಯಾಗಲೀ ಹಾಕಬೇಕು.

8. ಮಳೆಗಾಲದಲ್ಲಿ ಬಹಳ ಜಾಗರೂಕರಾಗಿರಬೇಕು. ಜಾರಿ ಅಪಾಯಕ್ಕೆ ಗುರಿಯಾಗದಂತೆ ರಬ್ಬರು ಬೂಟನ್ನೂ ಜೋಡುಗಳನ್ನೂ ಎಂದಿಗೂ ಧರಿಸಬಾರದು.

9. ಕಾಲುದಾರಿಗಳಲ್ಲಿ ಸದಾ ನಡೆದು ವ್ಯವಹಾರಜ್ಞಾನ, ಸಭ್ಯತೆ, ಮರ್ಯಾದೆ ಮೊದಲಾದುವುಗಳನ್ನು ಪ್ರದರ್ಶಿಸಬೇಕು.

**II. ಕಾಲುದಾರಿಗಳನ್ನು ಸಮರ್ಪಕವಾದ ಸ್ಥಿತಿಯಲ್ಲಿಡುವುದು**

ಈ ದಾರಿಗಳು ಸಮರ್ಪಕವಾದ ಸ್ಥಿತಿಯಲ್ಲಿ ಇಲ್ಲದ ವಿನಾ ಪಾದಚಾರಿಗಳು ಅವುಗಳನ್ನು ಉಪಯೋಗಿಸಲು ಆಗುವುದಿಲ್ಲ. ಆದುದರಿಂದ ಇದರ ವಿಷಯದಲ್ಲಿ ಕೆಲವು ಸೂಚನೆಗಳನ್ನು ಇಲ್ಲಿ ಕೊಟ್ಟಿದೆ:—

1. ಸಮರ್ಪಕವಾಗಿಲ್ಲದಿರುವಾಗ ಮ್ಯುನ್ಸಿಪಾಲಿಟಿ ಅಥವಾ ಸರ್ಕಾರದವರಿಗೆ ತಿಳಿಸಬೇಕು.

2. ಕಸ, ಕಲ್ಲು ಮೊದಲಾದುವುಗಳನ್ನು ಹಾಕದಂತೆ ನೋಡಿಕೊಳ್ಳಬೇಕು.

3. ತಿಂಡಿ, ಬಟ್ಟೆ ಮೊದಲಾದುವುಗಳನ್ನು ಹೊತ್ತುಕೊಂಡು ಮಾರುವವರಿಗೆ ಕಾಲುದಾರಿಗಳಲ್ಲಿ ವ್ಯಾಪಾರಮಾಡುವುದಕ್ಕೆ ಪ್ರೋತ್ಸಾಹವನ್ನು ಕೊಡಕೂಡದು.



ಚಿತ್ರ 2

4. ಮುಖ್ಯವಾಗಿ ಕಾಲುದಾರಿಗಳನ್ನು ಸರಿಯಾದ ಸ್ಥಿತಿಯಲ್ಲಿಡಬೇಕಾದ ಜವಾಬ್ದಾರಿಯು ಮ್ಯುನ್ಸಿಪಾಲಿಟಿಯವರ ಮತ್ತು ಸರ್ಕಾರದವರಮೇಲೆ ಬಿದ್ದಿರುತ್ತದೆ.

**III. ಕಾಲುದಾರಿಗಳಿಲ್ಲದ ರಸ್ತೆಗಳಲ್ಲಿ ನಡೆಯುವುದು ಹೇಗೆ?**

ಕಾಲುದಾರಿಗಳಿಲ್ಲದ, ಒಂದುವೇಳೆ ಇದ್ದರೂ ಉಪಯೋಗಿಸಲು ಸಾಧ್ಯವಿಲ್ಲದಿರುವ ರಸ್ತೆಗಳಲ್ಲಿ ಸುರಕ್ಷಿತವಾಗಿ ನಡೆಯುವುದು ಹೇಗೆಂಬುದನ್ನು ವಿಚಾರಮಾಡಬೇಕು. ಈ ವಿಷಯದಲ್ಲಿ ಕೆಳಗಿನ ಅಂಶಗಳನ್ನು ಸದಾ ಜ್ಞಾಪಕದಲ್ಲಿಡಬೇಕಾಗಿರುತ್ತದೆ:—

1. ಕಾಲುದಾರಿಗಳಿಲ್ಲದ ರಸ್ತೆಗಳಲ್ಲಿ ವಾಹನಗಳನ್ನು ಎದುರು ನೋಡುತ್ತಾ ಬಲಭಾಗದ ಕೊನೆಯಲ್ಲಿ (ರಸ್ತೆಯ ಅಂಚಿನಲ್ಲಿ) ನಡೆಯಬೇಕು. (ಚಿತ್ರ 2)

2. ಜನಗಳ ಸಂಖ್ಯೆಯು ಹೆಚ್ಚಾಗಿರುವಾಗಂತೂ ಇದಕ್ಕೆ ಹೆಚ್ಚು ಗಮನಕೊಡಬೇಕು.

3. ಮೋಟಾರು ಗಾಡಿಯನ್ನು ನಡೆಯಿಸುವವನು ಹೆಚ್ಚು ತೊಂದರೆಯಿಲ್ಲದಂತೆ ಒಬ್ಬ ಮನುಷ್ಯನನ್ನು ಮಾತ್ರ ಕಾಪಾಡಲು ಯತ್ನಿಸಬಹುದು. ಆದರೆ ರಸ್ತೆಯ ನಾನಾ ಭಾಗಗಳಲ್ಲಿ ಜನರು ನಡೆಯುತ್ತಿರುವಲ್ಲಿ ಗದ್ದಲ ಮತ್ತು ಕಾಲ ವ್ಯವಧಾನಗಳಿಗೆ ಅವಕಾಶವಾಗಿ ವಾಹನ ನಡೆಯಿಸುವವರಿಗೆ ದಿಕ್ಕುತೋಚದೆ, ಅನೇಕ ಅಪಾಯಗಳು ಅವರಿಗೂ, ಇತರರಿಗೂ ಸಂಭವಿಸಬಹುದು. ಕೆಲವುವೇಳೆ ತಪ್ಪಿತಸ್ಥರಲ್ಲದವರಿಗೆ ತೊಂದರೆಗಳಾಗಬಹುದು.

4. ಪಾದಚಾರಿಗಳು ಗೊತ್ತಾದ ಒಂದೇ ಭಾಗದಲ್ಲಿ ಹೋಗುತ್ತಿರುವಲ್ಲಿ, ಸುಖವಾಗಿಯೂ, ಅಪಾಯಗಳಿಗೆ ಈಡಾಗದೆಯೂ, ಎದುರು ಬರುತ್ತಿರುವ ಜನರನ್ನು ತಪ್ಪಿಸಿಕೊಂಡುಹೋಗಬೇಕೆಂಬ ಆತಂಕವಿಲ್ಲದೆಯೂ ನಡೆಯಬಹುದು.

**IV. ರಾತ್ರಿವೇಳೆಯಲ್ಲಿ ದೀಪಗಳಿಲ್ಲದ ರಸ್ತೆಗಳಲ್ಲಿ ನಡೆಯುವುದು ಹೇಗೆ?**

ಈ ವಿಷಯದಲ್ಲಿ ಕೆಳಗೆ ತಿಳಿಸಿರುವುದನ್ನು ಗಮನದಲ್ಲಿಡಬೇಕು:—

1. ಲಾಂದ್ರವನ್ನಾಗಲೀ ಅಥವಾ ಬೆಳಕನ್ನು ಕೊಡುವ ಇತರ ಸಾಧನವನ್ನಾಗಲೀ ತೆಗೆದುಕೊಂಡು ಹೋಗುವುದು ಒಳ್ಳೆಯದು.

2. ಕಣ್ಣು ತೆರೆದುಕೊಂಡು ಶಬ್ದವನ್ನು ಕೇಳುತ್ತಾ, ಜಾಗರೂಕತೆಯಿಂದ ನಡೆಯಬೇಕು.

3. ಅಜಾಗರೂಕತೆಯಿಂದ ನಡೆಯುತಕ್ಕವರು ಕೆಲವುವೇಳೆ ಸ್ವತಃ ಅಪಾಯದಿಂದ ತಪ್ಪಿಸಿಕೊಂಡರೂ ಇತರರ ಅಪಾಯಗಳಿಗೆ ಕಾರಣರಾಗಬಹುದು.

4. ತಿಳಿಬಣ್ಣದ (Light Coloured) ಉಡುಪನ್ನು ಧರಿಸದೆ ರಾತ್ರಿ ವೇಳೆ ರಸ್ತೆಗಳಲ್ಲಿ ನಡೆಯಬೇಕಾದ ಸಂಭವವಿರುವಲ್ಲಿ ಕುತ್ತಿಗೆಗೆ ಅಥವಾ ತೋಳಿನ ಸುತ್ತಲೂ ಅಗಲವಾದ ಬಿಳಿಯ ಬಟ್ಟೆ ಅಥವಾ ಕರವಸ್ತ್ರವನ್ನು ಸುತ್ತಿಕೊಂಡು ನಡೆಯಬೇಕು.

5. ಬಿಳಿಯ ಕೋಲನ್ನು ಹಿಡಿದುಕೊಂಡು ಹೋಗುತ್ತಿರುವವರನ್ನು ಕುರುಡರು ಅಥವಾ ಕಿವುಡರೆಂದು ಭಾವಿಸಬೇಕು. (ಇದು ನಮ್ಮ ದೇಶದಲ್ಲಿ ಸದ್ಯಃ ವ್ಯವಹಾರದಲ್ಲಿಲ್ಲ.)

6. ನಿಂತಿರುವ ವಾಹನಗಳ ಹಿಂದೆ ಯಾವಾಗಲೂ ನಿಲ್ಲಬಾರದು.

7. ವಾಹನಗಳು ಹೋಗುತ್ತಿರುವಾಗ ಕೆಲವು ವೇಳೆ ಧೂಳು ಏಳುತ್ತದೆ. ಆಗ ಧೂಳು ಸಂಪೂರ್ಣವಾಗಿ ಮಾಯವಾಗುವವರೆಗೂ ರಸ್ತೆಯ ಪಕ್ಕದಲ್ಲಿ ಕೆಲವು ನಿಮಿಷ ಕಾದು ಅನಂತರ ನಡೆಯಬೇಕು.

### V. ರಸ್ತೆಯನ್ನು ದಾಟುವುದು ಹೇಗೆ?

ವಾಹನಗಳು ಹೆಚ್ಚಾಗಿ ಹೋಗಿಬರುವ ರಸ್ತೆಗಳಲ್ಲಿ ಸುಖವಾಗಿ ದಾಟುವುದೆಂಬುದು ಒಂದು ಕಷ್ಟಕರವಾದ ಕೆಲಸವೇ ಸರಿ. ಆದುದರಿಂದ ಈ ವಿಷಯದಲ್ಲಿ ಸದಾ ಜ್ಞಾಪಕದಲ್ಲಿಡಬೇಕಾದ ಆದರ್ಶ ವಾಕ್ಯವು ಯಾವುದೆಂದರೆ: "ನಿಲ್ಲು, ನೋಡು, ವಾಹನಗಳು ಹೋಗಿಬರುವ ಶಬ್ದವನ್ನು ಕಿವಿಗೊಟ್ಟು ಕೇಳು."

1. ದಾಟುವುದಕ್ಕೆ ಮುಂಚೆ ಬಲಗಡೆ ನೋಡಬೇಕು. ವಾಹನಗಳೆಲ್ಲವೂ ಹೋಗುವವರೆಗೆ ಕಾದಿರಬೇಕು. (ಚಿತ್ರ 3)

2. ರಸ್ತೆಯ ಮಧ್ಯಕ್ಕೆ ಸುಖವಾಗಿ ಹೋಗುವುದಕ್ಕೆ ಕಾಲ ವಿದೆಂಬುದನ್ನು ನಿರ್ಧರಿಸಿಕೊಂಡು ಅನುಮಾನ ಮಾಡದೆ ಜಾಗ್ರತೆಯಾಗಿ



ಚಿತ್ರ 3

ಮುಂದಕ್ಕೆ ಹೋಗಬೇಕು. ಅನಂತರ ನಿಲ್ಲಬೇಕು. ಎಡಗಡೆ ನೋಡಬೇಕು. ವಾಹನಗಳು ಇಲ್ಲದಿರುವಲ್ಲಿ ದಾಟಬೇಕು.




ಚಿತ್ರ 4

3. ರಸ್ತೆಗಳನ್ನು ನೇರವಾಗಿ ದಾಟಬೇಕು. ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಹೋಗಕೂಡದು. ಹೀಗೆ ಮಾಡಿದಲ್ಲಿ ವಾಹನಗಳಿಗೆ ಸಿಕ್ಕಿ ಅಪಾಯಕ್ಕೆ ಗುರಿಯಾಗಬಹುದು.

4. ರಾತ್ರಿವೇಳೆ ದೀಪವಿರುವ ಜಾಗದಲ್ಲಿ ದಾಟಬೇಕು. ಹೀಗೆ ಮಾಡುವುದರಿಂದ ಬರುವವರು ನಿನಗೆ ಕಾಣುತ್ತಾರೆ; ಇತರರೂ ನಿನ್ನನ್ನು ನೋಡಬಹುದು.

5. ದಾಟುವುದಕ್ಕೋಸ್ಕರ ಪ್ರತ್ಯೇಕವಾಗಿ ಏರ್ಪಡಿಸಿರುವ ಸೇಫ್ಟಿ ಐಲೆಂಡ್ಸ್ ಮುಂತಾದ ಸ್ಥಳಗಳಲ್ಲಿ ಮಾತ್ರ ದಾಟಬೇಕು. ವಾಹನ ನಡೆಯಿಸುವವರು ನಿಧಾನವಾಗಿ ವಾಹನಗಳನ್ನು ಬಿಡುತ್ತಾರೆ. (ಚಿತ್ರ 4)

6. ವಾಹನಗಳಿಗೂ, ಪಾದಚಾರಿಗಳಿಗೂ ಒಂದೇ ರಸ್ತೆ ಇರುವಲ್ಲಿ ನಿಂತು, ನೋಡಿ, ಕೇಳಿ, ರಸ್ತೆಯು ಖಾಲಿಯಾಗಿದೆಯೇ ಇಲ್ಲವೇ ಎಂಬುದನ್ನು ತಿಳಿದು ಅನಂತರ ಜಾಗ್ರತೆ ನಡೆಯಬೇಕು.

7. ಟ್ರಾಂಕಾರು ಮತ್ತು ಇತರ ಉದ್ದವಾಗಿರುವ ವಾಹನಗಳು ಸಂಚಾರಮಾಡುವ ರಸ್ತೆಗಳಲ್ಲಿ ರಸ್ತೆಯ ಅಂಚಿನ ಕಲ್ಲಿನ ಹತ್ತಿರ ಕಾದು ಅನಂತರ ದಾಟಬೇಕು. ಇಂತಹ ವಾಹನಗಳ ಹಿಂದಾಗಲೀ ಮುಂದಾಗಲೀ ದಾಟುವುದನ್ನು ಬಿಡಬೇಕು.

8. ನಿಂತಿರುವ ಕಾರಿನ ಹಿಂದಿನಿಂದ ದಾಟಬಾರದು. ಕಾರಣವೇನೆಂದರೆ ಎದುರುಗಡೆಯಿಂದ ಬರುತ್ತಿರುವ ವಾಹನಗಳನ್ನು ನಡೆಯಿಸುವವನಿಗೆ ದಾಟುತ್ತಿರುವುದು ತಿಳಿಯುವುದಿಲ್ಲ.

9. ಚಿಕ್ಕವರು, ಅಶಕ್ತರು ಇವರಿಗೆ ದಾಟುವುದಕ್ಕೆ ಸಹಾಯ ಮಾಡಬೇಕು. ಹೀಗೆ ಮಾಡಿದಲ್ಲಿ ಅವರೂ, ವಾಹನ ನಡೆಯಿಸುವವರೂ ಈ ಸಹಾಯವನ್ನು ಕೊಂಡಾಡುತ್ತಾರೆ.

10. ದಾಟುವುದಕ್ಕೆ ಮುಂಚೆ ಸುಖವಾಗಿ ದಾಟಲು ಸಾಧ್ಯವಾಗುತ್ತದೆಂಬುದನ್ನು ನಿರ್ಧರಿಸಿ ವಾಹನಗಳ ವೇಗ ಮತ್ತು ದಾಟಿಸಬೇಕಾಗಿರುವವರ ವೇಗ— ಇವುಗಳನ್ನು ಗಮನಕ್ಕೆ ತೆಗೆದುಕೊಂಡು ಅನಂತರ ದಾಟಬೇಕು.

11. ಟ್ರಾಫಿಕ್ ಸಂಜ್ಞೆಗಳನ್ನು ಪಾಲಿಸಬೇಕು.

12. ಟ್ರಾಫಿಕ್ ಪೋಲೀಸಿನವನ ಕೈ ಸಂಜ್ಞೆಗಳನ್ನು ಅನುಸರಿಸಿ ಅವನ ಮುಂಭಾಗದಲ್ಲಿ ದಾಟಬೇಕು. (ಚಿತ್ರ 5)



ಚಿತ್ರ 5

13. ಸುಖವಾಗಿ ದಾಟುವುದಕ್ಕೆ ರಸ್ತೆಯು ಯೋಗ್ಯವಾಗುವಂತೆ ಮಾಡುವುದೂ, ವಾಹನಗಳ ಸಂಚಾರವನ್ನು ಹತೋಟಿಯಲ್ಲಿಟ್ಟು ಕೊಳ್ಳುವುದೂ ಅವನ ಮುಖ್ಯ ಕರ್ತವ್ಯವಾಗಿರುತ್ತದೆ.

14. ದೀಪಗಳ ಮೂಲಕ ದಾಟುವ ಗುರುತುಗಳು ಇರುವಲ್ಲಿ ಹಸುರು ದೀಪವು ಕಾಣುವವರೆಗೂ ದಾಟಬಾರದು.

15. ರಸ್ತೆಯಲ್ಲಿ ದಾಟುವಾಗ ಚುರುಕಿನಿಂದ ಜಾಗ್ರತೆಯಾಗಿ ನಡೆಯಬೇಕು.

16. ಒಂದುವೇಳೆ ವಾಹನಗಳ ಮಧ್ಯದಲ್ಲಿ ಸಿಕ್ಕುವುದಾದರೆ ಅಲ್ಲಿಯೇ ಶಾಂತಚಿತ್ತದಿಂದ ನಿಲ್ಲಬೇಕು. ವಾಹನಗಳು ಹೋದನಂತರ ದಾಟಬೇಕು. ಮುಂದಕ್ಕೂ ಹಿಂದಕ್ಕೂ ಹೋಗಕೂಡದು. ಹೀಗೆ ಮಾಡಿದಲ್ಲಿ ವಾಹನ ನಡೆಯಿಸುವವರಿಗೆ ಏನು ಮಾಡಬೇಕೆಂಬುದು ಗೊತ್ತಾಗುವುದಿಲ್ಲ.

17. ಇತರರ ಸೌಖ್ಯಕ್ಕೆ ಸ್ವಲ್ಪಮಟ್ಟಿಗೆ ಪ್ರತಿಯೊಬ್ಬನೂ ಕಾರಣನೆಂಬುದನ್ನು ಮರೆಯಬಾರದು. ಸಾಧಾರಣವಾಗಿ ದಾರಿ ತೋರಿಸತಕ್ಕವರನ್ನು ಗುಂಪು ಪರೀಕ್ಷಿಸದೆ ಹಿಂಬಾಲಿಸುತ್ತದೆ. ಆದುದರಿಂದ ಸರಿಯಾದ ಜಾಗದಲ್ಲಿಯೂ ಸಕಾಲದಲ್ಲಿಯೂ ದಾಟಬೇಕು.

## VI. ರಸ್ತೆ ಮತ್ತು ಆಟಗಳು

ಹುಡುಗರು ರಸ್ತೆಗಳಲ್ಲಿ ಆಟವಾಡುತ್ತಿರುವುದನ್ನು ನಾವು ಆಗಾಗ್ಗೆ ನೋಡುತ್ತಿರುವೆವು. ಕೆಲವುವೇಳೆ ವಾಹನಗಳಿಗೆ ಸಿಕ್ಕಿ ಪ್ರಾಣವನ್ನು ಕಳೆದುಕೊಳ್ಳುವರು; ಕೆಲವುವೇಳೆ ಅಂಗವಿಹೀನರಾಗಿ ಸಾಯುವವರೆಗೂ ಕಷ್ಟಪಡುತ್ತಿರುವರು. ಆದುದರಿಂದ ಈ ವಿಷಯದಲ್ಲಿ ಕೆಳಗೆ ತಿಳಿಸಿರುವ ಅಂಶಗಳನ್ನು ಮಕ್ಕಳಿಗೆ ಕಲಿಸಬೇಕು :—

1. ರಸ್ತೆಗಳಲ್ಲಿ ಅಪಾಯಕರವಾದ ಆಟಗಳನ್ನು ಎಂದಿಗೂ ಆಡಬಾರದು. ಮಕ್ಕಳು ರಸ್ತೆಗಳಲ್ಲಿ ಗೋಲಿ, ಚಿನ್ನಿ ಕೋಲು, ಚಾಪು ಮುಂತಾದ ಆಟಗಳನ್ನು ಆಡುತ್ತಿರುವುದನ್ನೂ, ಗಾಳಿಪಟಗಳನ್ನು ಆಡಿಸುತ್ತಿರುವುದನ್ನೂ ನೋಡುತ್ತಿರುವೆವು. ಗಾಳಿಪಟಗಳನ್ನು ಆಡಿಸುತ್ತಿರುವಾಗ ಮಕ್ಕಳ ಗಮನವು ಪಟವಮೇಲೆ ಇರುತ್ತದೆ; ರಸ್ತೆಯಲ್ಲಿ

ಜಾಗ್ರತೆಯಾಗಿ ಹೋಗುತ್ತಿರುವ ವಾಹನಗಳಿಗೆ ಸಿಕ್ಕಿ ಅಪಾಯಗಳು ಆಗುವ ಸಂಭವವಿರುತ್ತವೆ. ಆದುದರಿಂದ ರಸ್ತೆಗಳಲ್ಲಿ ಎಂದಿಗೂ ಗಾಳಿ ಪಟಗಳನ್ನು ಆಡಿಸಬಾರದು. ಮತ್ತು ಗೋಲಿ ಮೊದಲಾದ ಆಟಗಳನ್ನೂ ಆಡಬಾರದು.

2. ಸಂಚಾರದಲ್ಲಿರುವ ವಾಹನಗಳಮೇಲೆ ಅಥವಾ ದೀಪದ ಕಂಭ, ಎಚ್ಚರಿಕೆಯನ್ನು ಸೂಚಿಸುವ ಕಂಭ ಮೊದಲಾದುವುಗಳ ಮೇಲೆ ಕಲ್ಲುಗಳನ್ನು ಎಸೆಯಬಾರದು. ವಾಹನಗಳಮೇಲೆ ಎಸೆದರೆ ಒಂದುವೇಳೆ ನಡೆಯಿಸುವವನ ಕಣ್ಣಿಗೆ ಬಿದ್ದು ಅಪಾಯವಾಗಬಹುದು; ಕೆಲವುವೇಳೆ ಕಣ್ಣು ಹೋಗಿ ಸಾಯುವವರೆಗೂ ಕಷ್ಟಪಡಬೇಕಾಗುತ್ತದೆ. ಅಲ್ಲದೆ ವಾಹನವು ಸರಿಯಾದ ಮಾರ್ಗದಲ್ಲಿ ಹೋಗುವುದಕ್ಕೆ ಆಗದೆ ಬೇರೆ ಮಾರ್ಗದಲ್ಲಿ ಹೋಗಬೇಕಾದ ಸಂಭವವು ಒದಗಿ ಜನರಮೇಲೆ ಹಾದು ಅನೇಕ ಅನರ್ಥಗಳು ಆಗಬಹುದು.

3. ನಿನ್ನ ತಂದೆಗಾಗಲೀ, ಅಣ್ಣನಿಗಾಗಲೀ ಅಥವಾ ವಾಹನ ನಡೆಯಿಸುವವನಿಗಾಗಲೀ, ಇತರರು ಈ ರೀತಿ ಮಾಡಬಾರದೆಂದು ಹೇಗೆ ಅಪೇಕ್ಷಿಸುತ್ತೀಯೋ ಹಾಗೆಯೇ ನೀನೂ ಸಹ ಎಸೆಯಬಾರದು ಮತ್ತು ಇತರರು ಹಾಗೆ ಮಾಡುತ್ತಿದ್ದರೆ ಅದನ್ನು ತಡೆಯಬೇಕು.

4. ಕೆಲವರು ಮೋಟಾರು ಕಾರಿನ ನಂಬರನ್ನೂ, ರೈಲ್ವೆ ಯಂತ್ರದ ಹೆಸರು ನಂಬರನ್ನೂ ತಿಳಿದು ಗುರ್ತಿಸುವ ಅಭ್ಯಾಸವನ್ನು ಇಟ್ಟುಕೊಂಡಿರುತ್ತಾರೆ. ರೈಲ್ವೆ ಯಂತ್ರದ ಹೆಸರು ಮೊದಲಾದುವುಗಳನ್ನು ತಿಳಿಯಲು ಯಂತ್ರವು ಸಂಚಾರದಲ್ಲಿರುವಾಗ ರಸ್ತೆಯಲ್ಲಿ ಓಡಿಹೋಗಿ ತಿಳಿಯಲು ಯತ್ನಿಸಬಾರದು. ಇಂತಹ ಅವಿವೇಕದ ಕೆಲಸವನ್ನು ಎಂದಿಗೂ ಮಾಡಬಾರದು. ಇವುಗಳಿಗಿಂತಲೂ ಹೆಚ್ಚು ಸಾಹಸದ ಮತ್ತು ಬುದ್ಧಿವಂತಿಕೆಯ ಆಟಗಳು ಇರುತ್ತವೆ.

5. ಆಟದ ಮೈದಾನದಲ್ಲಿ ಅಥವಾ ಕಾಂಪೌಂಡಿನಲ್ಲಿ ಆಡಬೇಕು. ಗದ್ದಲವಿರುವಾಗ ರಸ್ತೆಗಳಲ್ಲಿ ಎಂದಿಗೂ ಆಡಬಾರದು.

6. ವಿನೋದಕ್ಕಾಗಿ ಆಡುವ ಆಟಗಳು ಬಹಳ ಒಳ್ಳೆಯವು. ಆದರೆ ಅಪಾಯಕರವಾದ ಆಟಗಳನ್ನು ಎಂದಿಗೂ ಆಡಬಾರದು.

7. ಆಟದ ಮೈದಾನವಾಗಲೀ ಅಥವಾ ಸುರಕ್ಷಿತವಾದ ಸ್ಥಳವಾಗಲೀ ಇಲ್ಲದಿರುವಾಗ ತಂದೆತಾಯಿಗಳನ್ನಾಗಲೀ ಉಪಾಧ್ಯಾಯರನ್ನಾಗಲೀ ಉತ್ತಮವಾದ ಮತ್ತು ಸುರಕ್ಷಿತವಾದ ಸ್ಥಳಗಳನ್ನುಕೇಳಬೇಕು.



ಚಿತ್ರ 6

8. ಚೆಂಡನ್ನಾಗಲೀ, ಟೋಪಿ ಮೊದಲಾದುದನ್ನಾಗಲೀ, ಸ್ನೇಹಿತನನ್ನಾಗಲೀ ರಸ್ತೆಗಳಲ್ಲಿ ಅಟ್ಟಿಕೊಂಡು ಹೋಗಬಾರದು. (ಚಿತ್ರ 6)

9. ಅತಿರಭಸದಿಂದ ರಸ್ತೆಗಳಲ್ಲಿ ನುಗ್ಗಿದರೆ ವಾಹನಗಳಿಗೆ ಸಿಕ್ಕಿ ಅಪಾಯಕ್ಕೆ ಈಡಾಗಬಹುದು.

10. ಒಂದುವೇಳೆ ಚೆಂಡು ರಸ್ತೆಯಲ್ಲಿ ಹೋಗುವಲ್ಲಿ ನಿಂತು, ನೋಡಿ, ಅನಂತರ ನುಗ್ಗಬೇಕು.

11. ವಾಹನಗಳಲ್ಲಿ ಕದ್ದು ಸವಾರಿಯನ್ನು ಎಂದಿಗೂ ಮಾಡಬಾರದು. ಈ ರೀತಿ ಸವಾರಿಮಾಡಿ ಅಪಾಯಗಳಿಗೆ ಈಡಾಗುತ್ತಿರುವವರನ್ನು ನಾವು ನೋಡುತ್ತಿರುವೆವು.

12. ಒಂದುವೇಳೆ ಅಪಾಯವಿಲ್ಲದಂತೆ ಕದ್ದು ಸವಾರಿಮಾಡಬಹುದೆಂಬುದು ತೋರಿಬಂದರೂ ಈ ರೀತಿ ಮಾಡಬಾರದು. ಕಾರಣವೇನೆಂದರೆ ನಿಮಗಿಂತ ಚಿಕ್ಕವರು ಈ ರೀತಿ ಮಾಡಲು ಅನುಕರಿಸುವರೆಂಬುದನ್ನು ಯೋಚನೆಮಾಡಬೇಕು.

**ಬಾಲಕರು ಕಂಠಪಾಠ ಮಾಡಬೇಕಾದ ನಿಯಮಗಳು :—**

**1. ಸಾಧ್ಯವಾಗುವಾಗಲೆಲ್ಲಾ ಕಾಲುದಾರಿಯಲ್ಲೇ ನಡೆಯಬೇಕು.**

**2. ದಾಟುವುದಕ್ಕೆ ಪ್ರತ್ಯೇಕ ಸ್ಥಳವಿರುವಲ್ಲಿ ಅಲ್ಲಿಯೇ ದಾಟಬೇಕು.**

**3. ರಸ್ತೆಯನ್ನು ದಾಟುವುದಕ್ಕೆ ಮುಂಚೆ ಎರಡು ಕಡೆಗಳಲ್ಲಿಯೂ ನೋಡಬೇಕು. ಹಿಂದೆ ಮುಂದೆ ನೋಡದೆ ನಡೆಯಬಾರದು.**

**4. ಕದ್ದು ಸವಾರಿಯನ್ನು ಎಂದಿಗೂ ಮಾಡಬಾರದು.**

**5. ಸಂಚಾರದಲ್ಲಿರುವ ವಾಹನಗಳ ಕಡೆಗೆ ಕಲ್ಲುಗಳನ್ನು ಎಸೆಯಬಾರದು.**

**6. ರಸ್ತೆಯಲ್ಲಿ ಚೆಂಡನ್ನಾಗಲೀ, ಸ್ನೇಹಿತನನ್ನಾಗಲೀ ಅಟ್ಟಿಕೊಂಡು ಹೋಗಬಾರದು.**

**7. ಆಟದ ಮೈದಾನದಲ್ಲಿ ಅಥವಾ ವಿಶಾಲವಾದ ಮೈದಾನ ದಲ್ಲಿ ಸದಾ ಆಡಬೇಕು.**

**8. ರಸ್ತೆಗಳಲ್ಲಿ ಆಡಲೇಕೂಡದು.**

### ಪ್ರಶ್ನೆಗಳು

1. 50 ವರ್ಷಗಳ ಹಿಂದೆ ರಸ್ತೆಗಳಲ್ಲಿ ಕಾಲುನಡಗೆಯು ಈಗಿನಷ್ಟು ಅಪಾಯುಕರವಾಗಿರಲಿಲ್ಲ. ಕಾರಣವೇನು ?
2. ಈಚೆಗೆ ರಸ್ತೆ ಮೊದಲಾದುವುಗಳಲ್ಲಿ ಆಕಸ್ಮಿಕ ಅಪಾಯು, ಮರಣ ಮೊದಲಾದುವುಗಳ ಸಂಖ್ಯೆಯು ಹೆಚ್ಚುತ್ತಿರುವುದು ಕಾರಣವೇನು ?
3. ಕಾಲುದಾರಿಗಳು ಇರುವಾಗ ಹೇಗೆ ನಡೆಯುಬೇಕೆಂಬುದನ್ನು ತಿಳಿಸಿ ?
4. ಕಾಲುದಾರಿಗಳಿಲ್ಲದ ರಸ್ತೆಗಳಲ್ಲಿ ಸುಖವಾಗಿ ನಡೆಯುಬೇಕಾದರೆ ಯಾವ ನಿಯುಮಗಳನ್ನು ಅನುಸರಿಸಬೇಕು ?
5. ದೀಪಗಳಿಲ್ಲದ ರಸ್ತೆಗಳಲ್ಲಿ ರಾತ್ರಿ ವೇಳೆ ಸುರಕ್ಷಿತವಾಗಿ ನಡೆಯು ಬೇಕಾದರೆ ಯಾವ ಅಂಶಗಳಿಗೆ ಗಮುನಕೊಡಬೇಕು ?
6. ರಸ್ತೆಯುನ್ನು ದಾಟುವಾಗ ಬಹಳ ಹುಷಾರಾಗಿರಬೇಕು. ಕಾರಣವೇನು? ಈ ವಿಷಯುಕ್ಕೆ ಸಂಬಂಧಪಟ್ಟ ಮುಖ್ಯಾಂಶಗಳಾವುವು ?
7. ಕಾಲುದಾರಿಗಳಿಲ್ಲದ ರಸ್ತೆಗಳಲ್ಲಿ ನಡೆಯುತ್ತಿರುವಾಗ ಮುಂಭಾಗದಲ್ಲಿ ಬರುತ್ತಿರುವ ವಾಹನಗಳನ್ನು ಎದುರುನೋಡುತ್ತಾ ನಡೆಯುಬೇಕು. ಏಕೆ ?

**ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಅಥವಾ ಎರಡು ವಾಕ್ಯಗಳಲ್ಲಿ ಉತ್ತರವನ್ನು ಹೇಳಿ :—**

1. ರಸ್ತೆಗಳಲ್ಲಿ ಮುಕ್ಕಳು ಏಕೆ ಆಟವಾಡಬಾರದು ?
2. ಸಂಚಾರದಲ್ಲಿರುವ ವಾಹನಗಳಮೇಲೆ ಕಲ್ಲುಗಳನ್ನು ಏಕೆ ಎಸೆಯು ಬಾರದು ?
3. ಆಟದ ಮೈದಾನದಲ್ಲಿ ಮಾತ್ರ ಆಟವನ್ನು ಏಕೆ ಆಡಬೇಕು ?
4. ರಸ್ತೆಗಳಲ್ಲಿ ಚೆಂಡನ್ನು ಏಕೆ ಅಟ್ಟಿಕೊಂಡು ಹೋಗಬಾರದು ?
5. ಅತಿರಭಸದಿಂದ ರಸ್ತೆಗಳಲ್ಲಿ ನುಗ್ಗಬಾರದು. ಏಕೆ ?
6. ವಾಹನಗಳಲ್ಲಿ ಕದ್ದು ಸವಾರಿಮಾಡಬಾರದು. ಏಕೆ ?

# ಎರಡನೆಯ ಅಧ್ಯಾಯ

## ಸುರಕ್ಷಿತವಾಗಿ ಸೈಕಲ್ ಸವಾರಿಮಾಡುವುದು

## (Safe Cycling)

ಈಚೆಗೆ ಪಟ್ಟಣಗಳಲ್ಲಿಯೂ, ಹಳ್ಳಿಗಳಲ್ಲಿಯೂ ಈ ವಾಹನಗಳನ್ನು ಉಪಯೋಗಿಸುತ್ತಿರುವವರ ಸಂಖ್ಯೆಯು ಹೆಚ್ಚುತ್ತಿರುವುದು. ಬೆಂಗಳೂರು ಸಿಟಿಯಲ್ಲಿ 1937-38ನೆಯ ಸಾಲಿನಲ್ಲಿ 10,854, ಮೈಸೂರು ಸಿಟಿಯಲ್ಲಿ 1938-39ನೆಯ ಸಾಲಿನಲ್ಲಿ 7,134 ಸೈಕಲ್ಲುಗಳು ಇದ್ದುವೆಂದು ತಿಳಿದು ಬರುತ್ತದೆ. ಈ ವಾಹನವನ್ನುಪಯೋಗಿಸತಕ್ಕವರು ಕೆಳಗಿನ ಅಂಶಗಳಿಗೆ ಹೆಚ್ಚು ಗಮನಕೊಡಬೇಕಾಗಿರುತ್ತವೆ:—

1. ರಸ್ತೆಗಳಲ್ಲಿ ಆದಷ್ಟು ಎಡಗಡೆ ಹೋಗಿ ಸವಾರಿಮಾಡಬೇಕು.

2. ಸುರಕ್ಷಿತವಾಗಿ ಸವಾರಿಮಾಡಬೇಕಾದರೆ ಸೈಕಲ್ಲು ಸಮರ್ಪಕವಾದ ಸ್ಥಿತಿಯಲ್ಲಿರಬೇಕು. ದೀಪ, ಬೆಲ್ ಅಥವಾ ಹಾರ್ನ್, ರಿಫ್ಲೆಕ್ಟರ್ ಇವೇ ಮೊದಲಾದುವುಗಳು ಇರಬೇಕು. ಸವಾರಿಮಾಡುವುದಕ್ಕೆ ಮುಂಚೆ ಬ್ರೇಕು ಸರಿಯಾಗಿದೆಯೆ ಇಲ್ಲವೆ ಎಂಬುದನ್ನು ಪರೀಕ್ಷಿಸಬೇಕು.

3. ಸವಾರಿಮಾಡುವವನಿಗೆ ಸರಿಯಾದ ಅಳತೆಯುಳ್ಳದ್ದಾಗಿರಬೇಕು. ಪೆಡಲ್ಲಿನಮೇಲೆ ಪಾದವನ್ನು ಇಡಲು ಸಾಧ್ಯವಿಲ್ಲದಿರುವಾಗ, ಹ್ಯಾಂಡ್ಲ್ ಬಾರಿಗೆ ಮೊಣಕಾಲು ತಾಕುವಂತಿರುವಾಗ ಮತ್ತು ಸೈಕಲ್ಲಿನ ಮೇಲೆ ಸರಿಯಾದ ಹತೋಟಿಯಿಲ್ಲದಿರುವಾಗ ಸವಾರಿಮಾಡಿದಲ್ಲಿ ಅವನಿಗೂ ಇತರರಿಗೂ ಅಪಾಯವಾಗಬಹುದು.

4. ರಾತ್ರಿವೇಳೆ ಸುಖವಾಗಿ ಸವಾರಿಮಾಡುವುದಕ್ಕೆ ದೀಪಗಳು ಆವಶ್ಯಕ. ಹ್ಯಾಂಡ್ಲ್ ಬಾರಿಗೆ ಹಾಕಿರುವ ಲಾಂದ್ರ ಅಥವಾ ಕೈಯಲ್ಲಿರುವ ಟಾರ್ಚ್ ದೀಪ ಇವು ಸಮರ್ಪಕವಾದುವುಗಳಲ್ಲ. ಎಣ್ಣೆಯ ದೀಪ ಅಥವಾ ಎಲೆಕ್ಟ್ರಿಕ್ ದೀಪವು ಸ್ವಲ್ಪ ದೂರದವರೆಗೆ ಬೆಳಕನ್ನು ತೋರಿಸುವುದಲ್ಲದೆ ಮುಂಭಾಗದಲ್ಲಿ ಬರುತ್ತಿರುವವರಿಗೆ ಇದು ಕಾಣಿಸುತ್ತದೆ.

5. ಸೈಕಲ್ಲಿನ ಹಿಂಭಾಗದಲ್ಲಿ ಒಂದು ರಿಫ್ಲೆಕ್ಟರ್ ಆವಶ್ಯಕ. ಇದು ಎರಡು ಇಂಚು ವ್ಯಾಸವುಳ್ಳದ್ದಾಗಿರಬೇಕು; ಶಾಸ್ತ್ರನಿಯಮಗಳಿಗೆ

3

ಅನುಸಾರವಾಗಿ ಸಿದ್ಧಪಡಿಸಲ್ಪಟ್ಟ 500 ಅಡಿಗಳ ದೂರದಲ್ಲಿ ಹಿಂದೆ ಬರುತ್ತಿರುವ ವಾಹನಗಳಿಗೆ ಕಾಣಿಸಲ್ಪಡುವಂತೆ ಸೈಕಲ್ಲಿಗೆ ಸೇರಿಸಲ್ಪಟ್ಟಿರಬೇಕು.

6. ಸೈಕಲ್ಲಿಗೆ ಬೆಲ್ ಅಥವಾ ಹಾರ್ನ್ ಆವಶ್ಯಕ. ನಡೆಯುತಕ್ಕವರಿಗೆ ಸೈಕಲ್ಲು ಸಂಚಾರಮಾಡುತ್ತಿರುವುದು ತಿಳಿವಳಿಕೆಗೆ ಬರಲು ಅವಕಾಶವಿರುತ್ತದೆ ಮತ್ತು ಅಪಾಯವಾಗುವ ಸಂಭವವು ಕಡಮೆಯಾಗುತ್ತದೆ.

7. ಸವಾರಿಮಾಡುವಾಗಲೆಲ್ಲಾ ಪಾದಚಾರಿಗಳ ಪ್ರಾಣರಕ್ಷಣೆಯನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಅವರ ಹತ್ತಿರದಲ್ಲಿ ಸವಾರಿ ಮಾಡುವಾಗ ನಿಧಾನವಾಗಿ ಹೋಗಬೇಕು; ಬಹಳ ಸಮೀಪದಲ್ಲಿಯಾಗಲೀ, ಅತಿರಭಸದಿಂದಾಗಲೀ ಸವಾರಿಮಾಡಬಾರದು.

8. ಪಾದಚಾರಿಗಳ ಹತ್ತಿರಕ್ಕೆ ಹೋಗುವವರೆಗೂ ಸುಮ್ಮನಿದ್ದು ಅನಂತರ ಬೆಲ್ಲನ್ನು ಬಾರಿಸಬಾರದು. ಸ್ವಲ್ಪ ದೂರದಿಂದಲೇ ಬಾರಿಸಬೇಕು.

9. ನಿಂತಿರುವ ವಾಹನ, ಹೆಬ್ಬಾಗಿಲು ಮೊದಲಾದುವುಗಳನ್ನು ದಾಟುವಾಗ, ಜಾಗರೂಕತೆಯಿಂದ ಆ ಕಡೆ ಈ ಕಡೆ ನೋಡದ ಹೊರತು ಎಂದಿಗೂ ದಾಟಬಾರದು.

10. ಸವಾರಿಮಾಡಲು ಬಾರದಿರುವಲ್ಲಿ ರಸ್ತೆಗಳಲ್ಲಿ ಕಲಿಯಲು ಪ್ರಾರಂಭಿಸಬಾರದು. ಮೈದಾನಗಳಲ್ಲಿ ಕಲಿಯಬೇಕು. ರಸ್ತೆಯಲ್ಲಿ ಸವಾರಿಮಾಡಬೇಕಾದರೆ ಸೈಕಲ್ಲಿನಮೇಲೆ ಸಂಪೂರ್ಣವಾದ ಹತೋಟಿ ಇರಬೇಕು.

11. ಸುಖವಾಗಿ ಎಷ್ಟು ಜಾಗ್ರತೆ ಹೋಗಬಹುದು, ಎಷ್ಟು ಜಾಗ್ರತೆಯಾಗಿ ನಿಲ್ಲಿಸಬಹುದು, ಎಷ್ಟು ಜಾಗ್ರತೆಯಾಗಿ ತಿರುಗಿಸಬಹುದು—ಇವೇ ಮೊದಲಾದುವುಗಳನ್ನು ಚೆನ್ನಾಗಿ ತಿಳಿದುಕೊಂಡಿರಬೇಕು.

12. ತಕ್ಷಣ ತಿರುಗಿಸುವುದರಿಂದ ಮಾತ್ರ ಅಪಾಯದಿಂದ ತಪ್ಪಿಸಿಕೊಳ್ಳುವಂತಹ ಸಂದರ್ಭಗಳಲ್ಲಿ ಸವಾರಿಮಾಡಕೂಡದು. ಹಾಗೆ ಮಾಡಿದಲ್ಲಿ ಅಪಾಯಗಳಿಗೆ ಗುರಿಯಾಗಬಹುದು.

13. ಮನೆಯನ್ನು ಬಿಡುವಾಗ ಸೈಕಲ್ಲನ್ನು ಕೈಯಿಂದ ತಳ್ಳಿಕೊಂಡು ರಸ್ತೆಗೆ ಹೋಗಿ ಅನಂತರ ಸವಾರಿಮಾಡಬೇಕು.

14. ಮನೆಗೆ ಹಿಂತಿರುಗಿ ಬರುವಾಗ ಸೈಕಲ್ಲನ್ನು ನಿಲ್ಲಿಸುವಾಗ ಸರಿಯಾದ ಕೈ ಸಂಜ್ಞೆಯನ್ನು ತೋರಿಸಿ ಇಳಿಯಬೇಕು.

15. ಕಾಲುದಾರಿಯಲ್ಲಿ ಎಂದಿಗೂ ಸವಾರಿಮಾಡಬಾರದು. ಇದು ಪಾದಚಾರಿಗಳ ಉಪಯೋಗಕ್ಕೆ ಮಾತ್ರ ಇರುತ್ತದೆ. ಇಲ್ಲಿ ಸವಾರಿಮಾಡುವುದು ಮರ್ಯಾದೆಯಲ್ಲ; ಅಪಾಯಕರ ಮತ್ತು ಅವಿವೇಕ ಪ್ರದರ್ಶನ.

16. ಸರಿಯಾಗಿ ಉಡುಪನ್ನು ಧರಿಸದಿರುವಲ್ಲಿ ಸುಖವಾಗಿ ಸವಾರಿ ಮಾಡುವುದು ಸಾಧ್ಯವಿಲ್ಲ. ಸಡಿಲವಾದ ಉಡುಪನ್ನು ಧರಿಸಿದಲ್ಲಿ ಸೈಕಲ್ಲಿನ ಸರಪಣಿ ಮೊದಲಾದುವುಗಳಿಗೆ ಸಿಕ್ಕಿ ಅಪಾಯವಾಗಬಹುದು. ಸವಾರಿಮಾಡುವುದಕ್ಕೆ ಮೊದಲು ಸ್ವಲ್ಪ ತೊಂದರೆಯನ್ನು ತೆಗೆದುಕೊಂಡು ಸರಿಯಾಗಿ ಉಡುಪನ್ನು ಧರಿಸಲೇಬೇಕು. ವಿಜಾರಗಳಿಗೆ ಕ್ಲಿಪ್ ಹಾಕಿಕೊಳ್ಳಲೇಬೇಕು.

17. ಪಾದಚಾರಿಯನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ತಕ್ಷಣವೇ ದಾರಿಯನ್ನು ಬಿಟ್ಟುಹೋದರೆ ಹಿಂದೆ ಬರುತ್ತಿರುವ ಕಾರು ಸವಾರಿ ಮಾಡುವವನ ಮೇಲೆ ಹೋಗಲು ಅವಕಾಶವಾಗುತ್ತದೆ.

18. ಸರ್ಕಸ್ ಟ್ರಿಕ್‌ಗಳನ್ನು ರಸ್ತೆಗಳಲ್ಲಿ ಮಾಡಲು ಎಂದಿಗೂ ಯತ್ನಿಸಬಾರದು.

19. ಸೈಕಲ್ಲಿನಮೇಲೆ ಚಮತ್ಕಾರದ ಕೆಲಸಗಳನ್ನು ಮಾಡಬೇಕಾದರೆ ಮೈದಾನದಲ್ಲಿ ಮಾಡಬೇಕು. ಬೀದಿಗಳಲ್ಲಿ ಎಂದಿಗೂ ಮಾಡಬಾರದು.

20. ವಾಹನಗಳು ಹೋಗಿಬರುವ ಸ್ಥಳಗಳಲ್ಲಿ ಸೊಟ್ಟ ಸೊಟ್ಟಾಗಿ ಸವಾರಿಮಾಡಬಾರದು. ಸೊಟ್ಟಸೊಟ್ಟಾಗಿರುವ ಬೆಟ್ಟವನ್ನು ಸವಾರಿ ಮಾಡಲು ಆಗದಿರುವಾಗ ಇಳಿದು ನಡೆದುಕೊಂಡು ಹೋಗಬೇಕು.

21. ರಸ್ತೆಗಳು ವದ್ದೆಯಾಗಿರುವಾಗ ಮತ್ತು ಜಾರುತ್ತಿರುವಾಗ ಇಳಿದು ನಡೆದುಕೊಂಡು ಹೋಗಬೇಕು.

22. ಜಾಗರೂಕತೆಯಿಂದ ಸಂಚಾರದ ಮಾರ್ಗವನ್ನು ಆರಿಸಬೇಕು. ಕೆಲವುವೇಳೆ ವಾಹನಗಳು ಸಂಚರಿಸದೆ ಇರುವ ಸ್ಥಳಗಳಲ್ಲಿ ಸವಾರಿಮಾಡಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಬಹುದು.

23. ಪಾದಚಾರಿಗಳೂ ಮೋಟಾರು ವಾಹನಗಳೂ ಹೆಚ್ಚಾಗಿ ಸಂಚಾರಮಾಡುತ್ತಿರುವ ರಸ್ತೆಗಳಲ್ಲಿ ಹೋಗಬೇಕಾದ ಸಂದರ್ಭವು ಒದಗಿದಲ್ಲಿ ನಡೆದುಕೊಂಡು ಹೋಗುವುದು ಉತ್ತಮ.

24. ಚಲಿಸುತ್ತಿರುವ ವಾಹನಗಳ ಹಿಂದೆ ಬಹಳ ಹತ್ತಿರದಲ್ಲಿ ಎಂದಿಗೂ ಸವಾರಿಮಾಡಬಾರದು; ಕಾರಣವೇನೆಂದರೆ ತಕ್ಷಣವೇ ವಾಹನವು ನಿಲ್ಲಬಹುದು.

25. ಮತ್ತೊಂದು ವಾಹನವನ್ನು ಹಿಡಿದುಕೊಂಡು ಅದರ ಜತೆಗೆ ಸವಾರಿಮಾಡುವುದು ಬಹಳ ಕೆಟ್ಟದ್ದು.

26. ಕೆಲಸವಿಲ್ಲದೆ ಸಾರ್ವಜನಿಕ ರಸ್ತೆಗಳಲ್ಲಿ ಸುಮ್ಮನೆ ಅಲೆಯುತ್ತಿರಕೂಡದು.

27. ಎರಡು ಅಥವಾ ಅದಕ್ಕಿಂತ ಹೆಚ್ಚು ಸಂಖ್ಯೆಯ ಬೈಸಿಕಲ್ಲುಗಳ ಮೇಲೆ ಪಕ್ಕದಲ್ಲಿಯೇ ಸವಾರಿಮಾಡಕೂಡದು; ಸಂಚಾರಕ್ಕೆ ಅಡಚಣೆಯಾಗುವುದಲ್ಲದೆ ಅಪಾಯವಾಗುವ ಸಂಭವವಿರುತ್ತದೆ.

28. ಬ್ರೇಕನ್ನು ಹಾಕುವಾಗ ಹುಷಾರಾಗಿರಬೇಕು.

29. 'ಸ್ಯಾಡಲ್' ಎಂಬ ಪೀಠದಮೇಲೆ ಕುಳಿತುಕೊಳ್ಳದೆ ಸವಾರಿಮಾಡಕೂಡದು.

## II. ಜನಗಳನ್ನು ಕೂಡಿಸಿಕೊಂಡು ಮತ್ತು ಗಂಟು ಮೊದಲಾದುವುಗಳನ್ನು ಇಟ್ಟುಕೊಂಡು ಸವಾರಿಮಾಡುವುದು

1. ಸಂಪೂರ್ಣವಾದ ಹತೋಟಿಯನ್ನು ಇಟ್ಟುಕೊಳ್ಳುವುದಕ್ಕೆ ಪ್ರತಿಬಂಧಕವಾಗುವುದರಿಂದ ಸೈಕಲ್ಲಿನಮೇಲೆ ಜನರನ್ನು ಕೂಡಿಸಿಕೊಂಡಾಗಲೀ, ಭಾರವಾದ ಗಂಟುಗಳನ್ನು ಇಟ್ಟುಕೊಂಡಾಗಲೀ ಎಂದಿಗೂ ಸವಾರಿಮಾಡಬಾರದು.

2. ಸೈಕಲ್ಲಿನಮೇಲೆ ಮತ್ತೊಬ್ಬನನ್ನು ಕೂರಿಸಿಕೊಂಡು ಸವಾರಿಮಾಡುವುದು ಕಾನೂನಿಗೆ ವಿರುದ್ಧ.

3. ಒಂದುವೇಳೆ ಗಂಟುಗಳನ್ನು ತೆಗೆದುಕೊಂಡು ಹೋಗಬೇಕಾದರೆ, ಇವಕ್ಕೋಸ್ಕರ ಏರ್ಪಡಿಸಿರುವ ಸೈಕಲ್ಲಿನ ಭಾಗದಲ್ಲಿ ಸರಿಯಾಗಿಟ್ಟುಕೊಂಡು ಸವಾರಿಮಾಡಬೇಕು.

4. ಒಂದೇ ಕೈಯಿಂದ ಸವಾರಿಮಾಡಿಕೊಂಡು ಹೋಗುವುದು ಅಪಾಯಕರ.

5. ಸ್ನೇಹಿತನ ಜತೆಗೆ ಸವಾರಿಮಾಡುವಾಗ ಜಾಗರೂಕತೆಯಿಂದ ಮಾಡಬೇಕು.

6. ರಸ್ತೆಯ ಅಗಲವು ಮತ್ತು ವಾಹನಗಳು ಹೋಗಿಬರುವಿಕೆಯು ಸವಾರಿಮಾಡುವುದಕ್ಕೆ ಸಹಾಯಕವಾಗಿರುವಾಗ ಜೋಡಿಯಾಗಿ ಸವಾರಿ ಮಾಡಬೇಕು.

7. ರಸ್ತೆಯು ಇಕ್ಕಟ್ಟಾಗಿದ್ದಾಗ ಮತ್ತು ವಾಹನಗಳ ಸಂಚಾರವು ಹೆಚ್ಚಾಗಿದ್ದಾಗ ಜೋಡಿಯಾಗಿ ಸವಾರಿಮಾಡಬಾರದು. ಸೈಕಲ್ ಸೈಕಲ್ಲಿಗೆ ಸ್ವಲ್ಪ ಅಂತರವು ಇರಬೇಕು.

8. ನಿಧಾನವಾಗಿ ಹೋಗುತ್ತಿರುವ ವಾಹನಕ್ಕಿಂತ ಮುಂದೆ ಹೋಗ ಬೇಕಾದಾಗ ಎದುರುಕಡೆಯಿಂದ ಬರುತ್ತಿರುವ ವಾಹನವನ್ನು ಗಮನಕ್ಕೆ ತೆಗೆದುಕೊಂಡು ಜಾಗರೂಕತೆಯಿಂದ ಸವಾರಿಮಾಡಬೇಕು.

## III. ಸೈಕಲ್ಲುಗಳನ್ನು ಬಿಡುವುದು (Parking)

1. ಕಾಲುದಾರಿಗಳಲ್ಲಿ ಸೈಕಲ್ಲುಗಳನ್ನು ಬಿಡುವುದರಿಂದ ಜನರು ಅವುಗಳನ್ನು ಎಡವಿ ಅನೇಕ ಅಪಾಯುಗಳಿಗೆ ಈಡಾಗಬಹುದು.

2. ಸೈಕಲ್ಲುಗಳನ್ನು ಬಿಡುವುದಕ್ಕೆ ಪ್ರತ್ಯೇಕವಾದ ಸ್ಥಳವಿರಬೇಕು; ಮತ್ತು ಅವುಗಳನ್ನು ನಿಲ್ಲಿಸಲು ಅನುಕೂಲವಾಗುವಂತೆ ಸೌಕರ್ಯ ಗಳಿರಬೇಕು.

3. ಒಂದುವೇಳೆ ರಸ್ತೆಗಳಲ್ಲಿ ಸೈಕಲ್ಲುಗಳನ್ನು ಬಿಡಬೇಕಾದ ಸಂದರ್ಭ ಒದಗಿದಾಗ ಮನೆಗಳ ಹತ್ತಿರ ಬಿಡಬೇಕೇ ವಿನಾ ಟೆಲಿಫೋನು ಕಂಭಗಳಿಗಾಗಲೀ, ಕಾಲುದಾರಿಯ ಅಂಚುಕಲ್ಲುಗಳಿಗಾಗಲೀ ಒರಗಿಸಿ ಇಡಕೂಡದು.

4. ಉಪಯೋಗಿಸದಿದ್ದಾಗ ದಾರಿಯಲ್ಲಿಡದೆ ದೂರವಾಗಿ ನಿಲ್ಲಿಸ ಬೇಕು; ಮತ್ತು ಇಕ್ಕಟ್ಟಾದ ದಾರಿಯಲ್ಲಿ ಎಂದಿಗೂ ಬಿಡಬಾರದು.

5. ನೆಲದಮೇಲೆ ಎಂದಿಗೂ ಇಡಬಾರದು.

6. ಸೈಕಲ್ ಸವಾರಿಮಾಡುವವನು ಟ್ರಾಫಿಕ್ ಸಂಜ್ಞೆಗಳನ್ನು ತಿಳಿದುಕೊಂಡಿರಬೇಕು ಮತ್ತು ಅವುಗಳನ್ನು ಪಾಲಿಸಬೇಕು.

7. ಪೋಲೀಸಿನವರು ತೋರಿಸುವ ಕೈ ಸಂಜ್ಞೆಗಳನ್ನೂ, ಇತರ ವಾಹನವನ್ನು ನಡೆಯಿಸುವವರು ತೋರಿಸುವ ಸಂಜ್ಞೆಗಳನ್ನೂ ಆತುರದಿಂದ ಕಾದಿರಬೇಕು.

8. ಸಕಾಲದಲ್ಲಿ ಕೈ ಸಂಜ್ಞೆಗಳನ್ನು ಮಾಡಬೇಕು.

**IV. ತಿರುಗಿಸುವುದು**

1. ಒಂದು ಪಾರ್ಶ್ವದಿಂದ ಮತ್ತೊಂದು ಪಾರ್ಶ್ವಕ್ಕೆ ತಿರುಗಿಸಬೇಕಾದಾಗ ಯಾವ ಪಾರ್ಶ್ವಕ್ಕೆ ತಿರುಗಿಸುತ್ತೇವೆಂಬುದನ್ನು ಸೂಚಿಸಬೇಕು. ಯಾವ ಅಪಾಯವೂ ಸಂಭವಿಸದಂತಿರುವ ಸಮಯದಲ್ಲಿ ಮಾತ್ರ ತಿರುಗಿಸಬೇಕು.

2. ತಿರುಗುವಾಗ, ತಿರುಗಿಸುವಾಗ ತೋರಿಸುವ ಕೈ ಸಂಜ್ಞೆಯನ್ನು ಕೈಯಿಂದಲೇ ತೋರಿಸಬೇಕು. ಅನಂತರ ಕೈಯನ್ನು ಹ್ಯಾಂಡ್ಲ್ ಬಾರಿನಮೇಲೆ ಇಟ್ಟು ತಿರುಗಿಸಬೇಕು. ಬಲಕ್ಕೆ ತಿರುಗಿಸುವಾಗ ಬಲಕ್ಕೆ ತಿರುಗಿಸುವ ಸಂಜ್ಞೆಯನ್ನು ತೋರಿಸಿ ತಿರುಗಬೇಕು. ಎಡಕ್ಕೆ ತಿರುಗಿಸುವಾಗ ನಿಧಾನವಾಗಿ ಸವಾರಿಮಾಡಬೇಕು. ಸಾಕಾದಷ್ಟು ಕಾಲವನ್ನು ಕೊಟ್ಟು ಎಡಕ್ಕೆ ತಿರುಗಿಸಬೇಕು. ರಸ್ತೆಯ ಮಧ್ಯದಿಂದ ಎಡಕ್ಕೆ ತಿರುಗಬಾರದು.

3. ವಾಹನಗಳ ಸಂಚಾರವು ಹೆಚ್ಚಾಗಿರುವ ರಸ್ತೆಯಲ್ಲಿ ಬಲಕ್ಕೆ ತಿರುಗಬೇಕಾದರೆ ಎಡಕ್ಕೆ ತಿರುಗಿ ನಿಲ್ಲಬೇಕು. ಅನಂತರ ದಾಟುತ್ತಿರುವ ವಾಹನಗಳ ಜತೆಗೆ ಕೈ ಸಂಜ್ಞೆಯನ್ನು ತೋರಿಸಿ ದಾಟಬೇಕು.

## ಪ್ರಶ್ನೆಗಳು

1. ಸೈಕಲ್ ಸವಾರಿಮಾಡುವವರು ನೆನಪಿನಲ್ಲಿಟ್ಟುಕೊಳ್ಳಬೇಕಾಗಿರುವ ಮುಖ್ಯವಾದ ನಿಯಮಗಳು ಯಾವುವೆಂಬುದನ್ನು ಕುರಿತು ಸೈಕಲ್ ಸವಾರಿಯನ್ನು ಕಲಿಯುತ್ತಿರುವ ನಿಮ್ಮ ತಮ್ಮನಿಗೆ ಒಂದು ಕಾಗದವನ್ನು ಬರೆಯಿರಿ.
2. ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿಮಾಡಿ:—

(1) ಸುರಕ್ಷಿತವಾಗಿ ಸೈಕಲ್ ಸವಾರಿಮಾಡಬೇಕಾದರೆ ಸೈಕಲ್...... ಸ್ಥಿತಿಯಲ್ಲಿರಬೇಕು.

(2) ಸೈಕಲ್ಲಿನಮೇಲೆ ಸರಿಯಾದ.... ಇಲ್ಲದಿರುವಾಗ ಸವಾರಿಮಾಡಿದಲ್ಲಿ ಅಪಾಯವಾಗುತ್ತದೆ.

(3) ಸೈಕಲ್ಲಿನ ಹಿಂಭಾಗದಲ್ಲಿ ಎರಡು ಇಂಚು ವ್ಯಾಸವುಳ್ಳ ಒಂದು.... ಅವಶ್ಯಕ.

(4) ನಡೆಯುತಕ್ಕವರಿಗೆ ಸೈಕಲ್ ಸಂಚಾರ ಮಾಡುತ್ತಿರುವುದು ತಿಳಿವಳಿಕೆಗೆ ಬರಲು.... ಅವಶ್ಯಕ.

(5) ಸವಾರಿಮಾಡಲು ಬಾರದಿರುವಲ್ಲಿ ರಸ್ತೆಗಳಲ್ಲಿ ಕಲಿಯಲು....

(6) ಸೈಕಲ್ ಸವಾರಿಮಾಡುವುದನ್ನು.... ಕಲಿಯಬೇಕು.

(7) ಕಾಲುದಾರಿಯಲ್ಲಿ ಸೈಕಲ್ ಸವಾರಿಯನ್ನು....

(8) ರಸ್ತೆಯ ...ಕ್ಕೆ ಸದಾ ಸವಾರಿಮಾಡಬೇಕು.

(9) ಸರ್ಕಸ್ ಟ್ರಿಕ್‌ಗಳನ್ನು ಎಂದಿಗೂ ರಸ್ತೆಯಲ್ಲಿ....

(10) ಚಲಿಸುತ್ತಿರುವ ವಾಹನದ ಹಿಂದೆ ಹತ್ತಿರ ಎಂದಿಗೂ...... ಮಾಡಬಾರದು.

(11) ರಸ್ತೆಗಳು ಒದ್ದೆಯಾಗಿರುವಾಗ ಇಳಿದು....

(12) ಸೈಕಲ್ಲಿನಮೇಲೆ ......ಕೂಡಿಸಿಕೊಂಡಾಗಲೀ ...... ಇಟ್ಟುಕೊಂಡಾಗಲೀ ಸವಾರಿಮಾಡಬಾರದು.

(13) ರಸ್ತೆಯು ಇಕ್ಕಟ್ಟಾಗಿರುವಾಗ.... ಸವಾರಿಮಾಡಬಾರದು.

(14) ಕಾಲುದಾರಿಗಳಲ್ಲಿ ಸೈಕಲ್ಲುಗಳನ್ನು.... ಪಾದಚಾರಿಗಳು ಎಡವಿ ಅಪಾಯಕ್ಕೆ ಗುರಿಯಾಗುವರು.

(15) ಸೈಕಲ್ ಸವಾರಿಮಾಡುವವನು ಟ್ರಾಫಿಕ್...... ತಿಳಿದುಕೊಂಡಿರಬೇಕು.

## ಮೂರನೆಯ ಅಧ್ಯಾಯ

## ಮೋಟಾರು ಕಾರು, ಬಸ್ಸು ಮೊದಲಾದುವುಗಳಲ್ಲಿ ಸುಖವಾಗಿ ಪ್ರಯಾಣಮಾಡುವುದು

ಸೈಕಲ್ಲುಗಳಿಗಿಂತಲೂ ಜಾಗ್ರತೆ ಹೋಗುವ ವಾಹನಗಳು ಕಾರು, ಬಸ್ಸು ಮೊದಲಾದುವುಗಳಾಗಿರುತ್ತವೆ. ಸೈಕಲ್ಲಿನಮೇಲೆ ಒಬ್ಬ ಮನುಷ್ಯನು ಮಾತ್ರ ಸವಾರಿಮಾಡಬಹುದು. ಆದರೆ ಬಸ್ಸಿನಲ್ಲಿ ಹೆಚ್ಚು ಜನರು ಏಕಕಾಲದಲ್ಲಿ ಪ್ರಯಾಣಮಾಡಬಹುದು. ಅಲ್ಲದೆ ಪಟ್ಟಣಗಳಲ್ಲಿ ದೂರದಲ್ಲಿರುವ ಸ್ಥಳಗಳಿಗೆ ಆಗಾಗ್ಗೆ ಮತ್ತು ಜಾಗ್ರತೆಯಾಗಿ ಹೋಗಬೇಕಾಗಿರುವ ಆವಶ್ಯಕತೆ ಇರುವುದರಿಂದ ಈ ವಾಹನಗಳನ್ನು ಜನಗಳು ಉಪಯೋಗಿಸಲೇಬೇಕಾಗುತ್ತದೆ.

1. ಮೈಸೂರು ದೇಶದಲ್ಲಿ 2,249 ಕಾರುಗಳೂ, 570 ಬಸ್ಸುಗಳೂ, 347 ಲಾರಿಗಳೂ ಇವೆಯೆಂದು ತಿಳಿದುಬಂದಿದೆ.

2. ಈಚೆಗೆ ಬಸ್ಸು[1] ಅನಾಹುತಗಳ ಸಂಖ್ಯೆಯು ಹೆಚ್ಚುತ್ತಿರುವುದು. ಕೆಲವುವೇಳೆ ಪ್ರಯಾಣಿಕರ ಅವಿವೇಕ, ಅಜಾಗರೂಕತೆ ಮೊದಲಾದುವುಗಳು ಇವುಗಳ ಕಾರಣವಾಗಿರುತ್ತವೆ. ಆದುದರಿಂದ ಈ ವಿಷಯದಲ್ಲಿ ಕೆಲವು ಮುಖ್ಯ ಸಂಗತಿಗಳನ್ನು ಪ್ರತಿಯೊಬ್ಬನೂ ತಿಳಿಯಬೇಕಾಗಿರುತ್ತದೆ. ಇವು ಯಾವುವೆಂದರೆ:—

1. ವಾಹನಗಳು ಸಂಚಾರದಲ್ಲಿರುವಾಗ ಎಂದಿಗೂ ಹತ್ತಲು ಯತ್ನಿಸಬಾರದು.

2. ಹತ್ತುವಾಗಲೂ, ಇಳಿಯುವಾಗಲೂ ಬಹಳ ಹುಷಾರಾಗಿರಬೇಕು.

3. ಕಾರು ಅಥವಾ ಬಸ್ಸು ನಿಲ್ಲುವವರೆಗೂ ಇಳಿಯುವುದನ್ನಾಗಲೀ ಹತ್ತುವುದನ್ನಾಗಲೀ ಮಾಡಕೂಡದು. ಇಂತಹ ಸಂದರ್ಭಗಳಲ್ಲಿ ಚತುರತೆಯನ್ನು ಪ್ರದರ್ಶಿಸಲು ಯತ್ನಿಸಬಾರದು.

---

1 ಮೈಸೂರು ದೇಶದಲ್ಲಿ 1935–36ರಲ್ಲಿ 106, 1936–37ರಲ್ಲಿ 190, 1937–38ರಲ್ಲಿ 335 ಅನಾಹುತಗಳು ನಡೆದವೆಂದು ತಿಳಿದುಬಂದಿದೆ.

4. ರಸ್ತೆಯ ಅಂಚಿನ ಕಲ್ಲಿನಮೇಲೆ ನಿಂತು ಬಲಕ್ಕೆ ನೋಡಿ ವಾಹನ ಸಂಚಾರವಿಲ್ಲದಿರುವಾಗ ಜಾಗ್ರತೆಯಾಗಿ ಬಸ್ಸಿನ ಹತ್ತಿರಕ್ಕೆ ಹೋಗಬೇಕು.




ಚಿತ್ರ 7

5. ಬಸ್ಸನ್ನು ಹತ್ತುವಾಗ ವಾಹನವು ಹೋಗುವ ದಿಕ್ಕಿಗೆ ಮುಖವನ್ನು ತಿರುಗಿಸಿಕೊಂಡು ಎಡಗೈಯಿಂದ ಹಿಡಿಕೆಯನ್ನು ಹಿಡಿದು ಕೊಂಡು ಬಲ ಪಾದವನ್ನು ಮೊದಲು ಇಡಬೇಕು. ಒಂದು ವೇಳೆ ವಾಹನವು ಆಕಸ್ಮಿಕವಾಗಿ ಮುಂದಕ್ಕೆ ಜರುಗಿದರೂ ಬೀಳುವ ಸಂಭವವು ಇರುವುದಿಲ್ಲ. (ಚಿತ್ರ 7)

6. ಬಸ್ಸನ್ನು ಹತ್ತಿ ಜಾಗ್ರತೆ ಒಳಗೆ ಹೋಗಿ ಪೀಠದಲ್ಲಿ ಸರಿಯಾಗಿ ಕುಳಿತುಕೊಳ್ಳಬೇಕು. ಅನಾವಶ್ಯಕವಾಗಿ ಇತರ ಪ್ರಯಾಣಿಕರಿಗೆ ಯಾವ ವಿಧವಾದ ತೊಂದರೆಯನ್ನೂ ಉಂಟುಮಾಡಬಾರದು.

7. ಗಾಳಿ ಬೆಳಕು ಇವುಗಳಿಗೋಸ್ಕರ ಕಿಡಕಿಗಳಿರುತ್ತವೆ. ಇವು ಗಳನ್ನು ಆವಶ್ಯಕಬಿದ್ದಾಗ (ಮಳೆ ಬರುತ್ತಿರುವಾಗ) ಮುಚ್ಚಬೇಕು. ಗ್ಲಾಸ್ ಬಾಗಿಲುಗಳು ಇರುವಲ್ಲಿ ಬಹಳ ಹುಷಾರಾಗಿ ತೆಗೆಯಬೇಕು ಮತ್ತು ಮುಚ್ಚಬೇಕು.

8. ಕಾರ್ಬನ್ ಮಾನಾಕ್ಸೈಡ್ ಎಂಬ ಅನಿಲವು ಉತ್ಪನ್ನವಾಗದಂತೆ ಗಾಳಿಯು ಧಾರಾಳವಾಗಿ ಬರುವಂತೆ ಬಾಗಿಲುಗಳನ್ನು ತೆರೆಯಬೇಕು.

9. ಒಳಗಡೆ ಬೀಡಿ ಮೊದಲಾದುವುಗಳನ್ನು ಸೇದಬಾರದು. ಪೆಟ್ರೋಲನ್ನು ಹಾಕುತ್ತಿರುವಾಗ ಅದರ ಹತ್ತಿರ ಬೆಂಕಿಕಡ್ಡಿಯನ್ನು ಗೀಚಬಾರದು.

10. ಟಿಕೆಟ್ಟನ್ನು ಕೊಂಡುಕೊಳ್ಳದೆ ಎಂದಿಗೂ ಪ್ರಯಾಣಮಾಡ ಬಾರದು. ಕೇಳಿದಾಗ ತೋರಿಸಲು ಸಿದ್ಧವಾಗಿರಬೇಕು.

11. ಬಸ್ಸಿನ ಛಾರ್ಜಿಗೆ ಬೇಕಾದಷ್ಟು ಹಣವನ್ನು ಇಟ್ಟುಕೊಂಡು ಪ್ರಯಾಣಮಾಡಬೇಕು ಮತ್ತು ಟಿಕೆಟ್ಟನ್ನು ಪರೀಕ್ಷಿಸಬೇಕು.

12. ಕಂಡಕ್ಟರಿಗೂ ಪ್ರಯಾಣಿಕರಿಗೂ ಛಾರ್ಜು ಮೊದಲಾದ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳು ಒದಗುವಲ್ಲಿ ಬಸ್ಸಿನ ನಂಬರು ಮೊದಲಾದುವುಗಳನ್ನು ಗುರ್ತಿಸಿಕೊಂಡು ಮಾಲೀಕರಿಗೆ ತಿಳಿಸಬೇಕು.

13. ಬಸ್ಸಿನಲ್ಲಿ ಕುಳಿತುಕೊಂಡು ಒಳಗೆ ಉಗುಳುವುದು ಅಥವಾ ಕಿಡಕಿಗಳ ಮೂಲಕ ಉಗುಳುವುದು — ಇವೇ ಮೊದಲಾದುವುಗಳನ್ನು ಮಾಡಬಾರದು.

14. ಬಸ್ಸನ್ನು ಇಳಿಯುವಾಗ ಎಡಕ್ಕೆ ನೋಡಬೇಕು. ವಾಹನವು ಹೋಗುವ ದಿಕ್ಕಿಗೆ ಮುಖವನ್ನು ತಿರುಗಿಸಿಕೊಂಡು ಒಳಗಿರುವ ಕೈಯಿಂದ




ಚಿತ್ರ 8

(ಬಲಗೈಯಿಂದ) ಹಿಡಿಕೆಯನ್ನು ಹಿಡಿದುಕೊಂಡು, ಹೊರಗಿರುವ ಪಾದವನ್ನು (ಎಡಪಾದ) ಮೊದಲು ಇಟ್ಟು ಇಳಿಯಬೇಕು. ಎಡಕ್ಕೆ ನೋಡಿ ರಸ್ತೆಯ ಅಂಚಿನಲ್ಲಿ ಕಲ್ಲಿನ ಹತ್ತಿರ ನಡೆಯಬೇಕು. ಒಂದುವೇಳೆ ವಾಹನವು ಮುಂದಕ್ಕೆ ಹೋದರೂ ಯಾವ ಅಪಾಯವೂ ಆಗುವುದಿಲ್ಲ. (ಚಿತ್ರ 8)

15. ಕಾರಿನ ಹಿಂದಿನಿಂದಾಗಲೀ, ಮುಂದಿನಿಂದಾಗಲೀ ಎದುರು ರಸ್ತೆಯ ಕಡೆಗೆ ಎಂದಿಗೂ ನಡೆಯಬಾರದು. ಒಂದುವೇಳೆ ದಾಟ ಬೇಕಾದರೆ, ದಾಟುವುದಕ್ಕೋಸ್ಕರ ಏರ್ಪಡಿಸಿರುವ ಸ್ಥಳದಲ್ಲಿ ಮಾತ್ರ ದಾಟಬೇಕು.

16. ವಾಹನಗಳನ್ನು ನಡೆಯಿಸುವವನ ಕೆಲಸವು ಅತಿಶಯವಾದ ಜವಾಬ್ದಾರಿಯುಳ್ಳದು; ಆದುದರಿಂದ ಅವಿಚ್ಛಿನ್ನವಾದ ಅವಧಾನವು ಅತ್ಯಾವಶ್ಯಕವಾಗಿರುತ್ತದೆ. ವಾಹನ ನಡೆಯಿಸುವವನ ಅವಧಾನವು ವಿಚ್ಛಿನ್ನವಾಗುವಂತೆ ಯಾವುದನ್ನೂ ಮಾಡಕೂಡದೆಂಬುದನ್ನು ಜ್ಞಾಪಕ ದಲ್ಲಿಡಬೇಕು.

17. ಪ್ರಯಾಣಿಕರ ಪ್ರಾಣಕ್ಕೆ ಅಪಾಯವಿರುವಾಗ ವಾಹನ ನಡೆಯಿಸುವವನಿಗೆ ತಿಳಿಸಿ ಬಸ್ಸನ್ನು ನಿಲ್ಲಿಸುವಂತೆ ಮಾಡಬೇಕು.

18. ಬಸ್ಸು ಮೊದಲಾದುವುಗಳಿಗೆ ಸಂಬಂಧಪಟ್ಟ ಬೈಲಾ ಮೊದಲಾದುವುಗಳನ್ನು ಪ್ರಯಾಣಿಕರು ತಿಳಿದುಕೊಳ್ಳಬೇಕಾಗಿರುವುದು ಆವಶ್ಯಕ.

19. ಬಸ್ಸಿಗೆ ಕಾಯುತ್ತಿರುವಾಗ ಪ್ರಯಾಣಿಕರು ಬಂದು ಸಿಸ್ತಿ ನಲ್ಲಿ ನಿಂತುಕೊಂಡು, ಹತ್ತುವಾಗ ಒಬ್ಬರಾದಮೇಲೊಬ್ಬರು ಹತ್ತಬೇಕು.

20. ಬಸ್ಸಿನಲ್ಲಿ ಪ್ರಯಾಣಮಾಡುತ್ತಿರುವಾಗ ಮರ್ಯಾದೆಯಿಂದ ನಡೆದುಕೊಳ್ಳಬೇಕು. ಇತರರು ನಿನ್ನ ವಿಷಯದಲ್ಲಿ ಯಾವ ರೀತಿಯಲ್ಲಿ ವರ್ತಿಸಬೇಕೆಂದು ಅಪೇಕ್ಷಿಸುತ್ತೀಯೋ ಅದೇ ರೀತಿಯಲ್ಲಿ ನೀನು ಇತರರ ವಿಷಯದಲ್ಲಿ ನಡೆದುಕೊಳ್ಳಬೇಕು. ಮಕ್ಕಳನ್ನು ಎತ್ತಿಕೊಂಡಿರುವ ತಾಯಿಯರು, ಕುರುಡರು, ಮುದುಕರು, ಕಾಯಿಲೆ ಯವರು ಬಸ್ಸಿನ ಹತ್ತಿರ ಕಾಯುತ್ತಿದ್ದರೆ ಅವರಿಗೆ ಬೇಕಾದ

ಸಹಾಯವನ್ನು ಮಾಡಬೇಕು. ಒಳ್ಳೆಯ ಅಭ್ಯಾಸಗಳನ್ನು ಕಲಿಯುವುದಕ್ಕೆ ಇಂತಹ ಸಂದರ್ಭಗಳು ಸರಿಯಾದ ಅವಕಾಶವನ್ನು ಕಲ್ಪಿಸುತ್ತವೆ.

## ಮೋಟಾರು ಕಾರುಗಳಲ್ಲಿ ಪ್ರಯಾಣಮಾಡುತ್ತಿರುವಾಗ ಕೆಳಗೆ ತಿಳಿಸಿರುವ ಅಂಶಗಳಿಗೆ ಗಮನ ಕೊಡಬೇಕು

1. ವಾಹನ ನಡೆಯಿಸುವವನ ಅವಧಾನವನ್ನು ಎಂದಿಗೂ ಕೆಡಿಸಬಾರದು. ಅವನ ಕೆಲಸಕ್ಕೆ ಅಡಚಣೆಯಾಗುವಂತೆ ಯಾವ ವಿಧವಾದ ಕೆಲಸವನ್ನೂ ಮಾಡಬಾರದು.

2. ಸೆಲ್ಫ್ ಸ್ಟಾರ್ಟರ್ ಬಟನ್ನನ್ನು ಪಾದದಿಂದ ಎಂದಿಗೂ ತುಳಿಯಬಾರದು.

3. ಒಳಗೆ ಬೀಡಿ, ಸಿಗರೇಟ್ ಮೊದಲಾದುವುಗಳನ್ನು ಸೇದಬಾರದು.

4. ಕಾರಿನ ಸಾಮಾನುಗಳನ್ನು (ಎಂದರೆ ಬ್ರೇಕ್, ಸ್ಟೀರಿಂಗ್ ಚಕ್ರ ಮೊದಲಾದುವು) ಎಂದಿಗೂ ಮುಟ್ಟಬಾರದು.

5. ಪ್ರಯಾಣ ಮಾಡುತ್ತಿರುವಾಗ ತಮಾಷೆ ಮೊದಲಾದುವುಗಳನ್ನು ಮಾಡಬಾರದು.

6. ವಾಹನ ನಡೆಯಿಸುವವನ ಅನುಮತಿಯಿಲ್ಲದೆ ಕೈ ಸಂಜ್ಞೆಗಳನ್ನು ಮಾಡಬಾರದು.

7. ಯಾವ ಸ್ಥಳದಲ್ಲಿ ಇಳಿಯಬೇಕೋ ಆ ಸ್ಥಳವು 50 ಗಜಗಳ ದೂರದಲ್ಲಿರುವಾಗಲೇ ನಡೆಯಿಸುವವನಿಗೆ ತಿಳಿಸಬೇಕು.

8. ಹತ್ತುವಾಗ ಮತ್ತು ಇಳಿಯುವಾಗ ಬಹಳ ಹುಷಾರಾಗಿರಬೇಕು.

9. ಬಾಗಿಲುಗಳನ್ನು ತೆರೆಯುವಾಗ ಮತ್ತು ಮುಚ್ಚುವಾಗ ಜಾಗರೂಕರಾಗಿರಬೇಕು.

10. ವಾಹನ ನಡೆಯಿಸುವವನ ಹತ್ತಿರ ಕುಳಿತಿರುವ ಪ್ರಯಾಣಿಕನು ಬಹಳ ಜಾಗರೂಕನಾಗಿರಬೇಕು. ಯಾವ ವಿಧವಾದ ತೊಂದರೆಯನ್ನೂ ಇವನಿಗೆ ಉಂಟುಮಾಡಬಾರದು.

11. ವಾಹನ ನಡೆಯಿಸುವವನ ಜತೆಗೆ ಸಂಭಾಷಣೆಯನ್ನು ಎಂದಿಗೂ ಪ್ರಾರಂಭಿಸಲು ಯತ್ನಿಸಬಾರದು.

12. ಪ್ರಯಾಣ ಮಾಡುತ್ತಿರುವಾಗ ಹೊರಗಡೆ ಕಾಗದದ ಚೂರು, ಬಾಳೆಹಣ್ಣಿನ ಸಿಪ್ಪೆ, ಮೊದಲಾದುವುಗಳನ್ನು ಎಂದಿಗೂ ಎಸೆಯ ಬಾರದು.

13. ಬೀದಿಗಳ ಹೆಸರು, ಮನೆಯ ನಂಬರು ಮೊದಲಾದುವು ಗಳನ್ನು ಪ್ರಯಾಣಿಕರೇ ನೋಡಿ ತಿಳಿದುಕೊಳ್ಳಬೇಕು.

14. ಅನಾಹುತಕ್ಕೆ ಸಿಕ್ಕಿ ಗಾಸಿಪಟ್ಟಿರುವ ಪ್ರಯಾಣಿಕರಿಗೆ ಪ್ರಥಮ ಚಿಕಿತ್ಸೆಯನ್ನು ಮಾಡಬೇಕಾಗಿರುವುದು ಪ್ರತಿ ಪ್ರಯಾಣಿಕನ ಕರ್ತವ್ಯ ವಾಗಿರುತ್ತದೆ. ಅನಾಹುತಕ್ಕೆ ಯಾರು ಕಾರಣರೆಂಬುವನ್ನು ತಿಳಿಯಲು ಯತ್ನಿಸಿ ಮುಂದಿನ ಕ್ರಮವನ್ನು ನಡೆಯಿಸಬೇಕು.

15. ವಾಹನ ನಡೆಯಿಸುವವನಿಗೆ ಆಕಸ್ಮಿಕ ಅಪಾಯ ಮೊದ ಲಾದುವುಗಳು ಸಂಭವಿಸುವುದಾದರೆ, ತಕ್ಷಣ ಮೇನ್ ಸ್ವಿಚ್ಚನ್ನು ಆಫ್ ಮಾಡಿ, ಬ್ರೇಕನ್ನು ಹಾಕಿ, ರಸ್ತೆಯ ಪಕ್ಕಕ್ಕೆ ಕಾರನ್ನು ನಿಲ್ಲಿಸಬೇಕು.

## ಸ್ಕೂಲ್ ಬಸ್ ಪೆಟ್ರೋಲ್

ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಶಾಲೆಯು ದೂರವಾಗಿರುವ ಪ್ರದೇಶ ಗಳಲ್ಲಿ ಶಾಲೆಯ ಅಧಿಕಾರಿಗಳು ಬಸ್ಸುಗಳನ್ನಿಟ್ಟು ಬಾಲಕರನ್ನು ಮನೆಯಿಂದ ಕರೆದುಕೊಂಡುಬರುವುದು, ಪುನಃ ಮನೆಗೆ ಕರೆದುಕೊಂಡುಹೋಗುವುದು ಇವೇ ಮೊದಲಾದುವುಗಳಿಗೆ ಏರ್ಪಾಡನ್ನು ಮಾಡಿರುತ್ತಾರೆ. ಬಾಲಕರು ಕುಳಿತುಕೊಳ್ಳುವಾಗ ಮತ್ತು ಇಳಿಯುವಾಗ ಹುಷಾರಾಗಿರಬೇಕು; ಮತ್ತು ಪ್ರಯಾಣಮಾಡುತ್ತಿರುವಾಗ ಬಾಲಕರು ವಾಹನ ನಡೆಯಿಸುವವನಿಗೆ ತೊಂದರೆಯನ್ನುಂಟುಮಾಡದಂತೆಯೂ, ಶಿಸ್ತಿನಿಂದ ಕುಳಿತುಕೊಂಡು ಸುಖವಾಗಿ ಪ್ರಯಾಣಮಾಡುವುದಕ್ಕೂ ಸರಿಯಾದ ಮೇಲ್ವಿಚಾರಣೆಯು ಆವಶ್ಯಕ.

ಆದುದರಿಂದ ಸ್ಕೂಲ್ ಬಸ್ ಪೆಟ್ರೋಲು ಆವಶ್ಯಕ.

**ಕಾರು, ಬಸ್ಸು ಮೊದಲಾದ ವಾಹನಗಳನ್ನು ನಡೆಯಿಸತಕ್ಕ ವರು ಆವಶ್ಯಕವಾಗಿ ತಿಳಿದುಕೊಳ್ಳಬೇಕಾಗಿರುವ ನಿಬಂಧನೆಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದೆ:—**

1. ಸದಾ ಮರ್ಯಾದೆಯಿಂದ ವರ್ತಿಸಬೇಕು. ಮುದುಕರು, ಚಿಕ್ಕಮಕ್ಕಳು ಮತ್ತು ಅಂಗವಿಹೀನರು, ಇವರುಗಳ ವಿಷಯದಲ್ಲಿ ಬಹಳ ಜಾಗರೂಕತೆಯಿಂದ ನಡೆದುಕೊಳ್ಳಬೇಕು.

2. ವಾಹನಗಳನ್ನು ಹೊರಡಿಸುವುದಕ್ಕೆ ಮೊದಲು ಬ್ರೇಕುಗಳನ್ನು ಪರೀಕ್ಷಿಸಬೇಕು.

3. ಯಾವಾಗಲೂ ಜಾಗರೂಕತೆಯಿಂದ ವೇಗವನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು.

4. ಪಟ್ಟಣಗಳಲ್ಲಿಯೂ, ಗ್ರಾಮಗಳ ರಸ್ತೆಗಳಲ್ಲಿಯೂ ಇರುವ ಎಚ್ಚರಿಕೆಯ ಪ್ರಕಟಣೆ, ಸಂಕೇತ ಮೊದಲಾದುವುಗಳಿಗೆ ಮುಖ್ಯವಾಗಿ ಗಮನ ಕೊಡಬೇಕು.

5. ತಿರುಗಿಸುವಾಗ ಗಮನಿಸಬೇಕಾದ ಅಂಶಗಳನ್ನು ನೆನಪಿನಲ್ಲಿಡಬೇಕು.

6. ಕನ್ನಡಿಯನ್ನು ಉಪಯೋಗಿಸಬೇಕು.

7. ಮತ್ತೊಂದು ವಾಹನವನ್ನು ಹಿಂಬಾಲಿಸಿ ಮುಂದೆ ಹೋಗುವಾಗ, ಮೂಲೆಗಳಲ್ಲಿ ತಿರುಗಿಸುವಾಗ, ರಸ್ತೆಗಳು ಸಂಧಿಸುವ ಸ್ಥಳದಲ್ಲಿ ಮತ್ತು ಇಕ್ಕಟ್ಟಾದ ಬೀದಿ ಸಂದಿಗಳಲ್ಲಿ ಹೋಗುವಾಗ ಅನುಸರಿಸಬೇಕಾದ ನಿಯಮಗಳನ್ನು ಕಾಪಾಡಬೇಕು.

8. ವಾಹನಗಳನ್ನು ನಿಲ್ಲಿಸತಕ್ಕ ಸ್ಥಳಗಳಲ್ಲಿ ಮಾತ್ರ ಕಾರು ಮೊದಲಾದುವುಗಳನ್ನು ಬಿಡಬೇಕು.

9. ಎತ್ತು, ಹಸು ಮೊದಲಾದ ಪ್ರಾಣಿಗಳು ಮತ್ತು ಎತ್ತಿನಗಾಡಿ, ಕುದುರೆಗಾಡಿ ಮೊದಲಾದುವು ಬರುತ್ತಿರುವಾಗ ಅತಿಶಯವಾದ ಎಚ್ಚರಿಕೆಯನ್ನು ತೆಗೆದುಕೊಂಡು ವಾಹನಗಳನ್ನು ಬಿಡಬೇಕು.

10. ವಾಹನಗಳು ಸಂಚಾರದಲ್ಲಿರುವಾಗ ನಾಟಕ, ಸಿನೆಮಾ ಮೊದಲಾದುವುಗಳ ಚೀಟಿಗಳನ್ನು ಎಂದಿಗೂ ಹಂಚಬಾರದು. ಇದನ್ನು ಖಂಡಿತವಾಗಿಯೂ ನಿಲ್ಲಿಸಬೇಕು.

11. ಎಲ್ಲ ಮೋಟಾರು ವಾಹನಗಳು ರಸ್ತೆಯ ಎಡ ಪಾರ್ಶ್ವದಲ್ಲಿ ಹೋಗಬೇಕು. ರಸ್ತೆಯ ಮಧ್ಯಭಾಗದಲ್ಲಿ ಮೋಟಾರು ಕಾರು ಮುಂತಾದ

ಬಹು ವೇಗದಿಂದ ಓಡುವ ವಾಹನಗಳು ಮಾತ್ರ ಸಂಚಾರಮಾಡಬೇಕು. ನಿಧಾನವಾಗಿ ಹೋಗುವ ವಾಹನಗಳು ರಸ್ತೆಯ ಎಡ ಪಾರ್ಶ್ವದಲ್ಲಿ ಹೋಗಬೇಕು.

12. ಬಹಳ ಇಕ್ಕಟ್ಟಾದ ರಸ್ತೆಯಲ್ಲಿ ಅಥವಾ ರಸ್ತೆಯ ಚೌಕದಲ್ಲಿ, ಇತರ ವಾಹನಗಳಿಗೆ ಅಡಚಣೆಯಾಗುವಂತೆ ವಾಹನಗಳನ್ನು ನಿಲ್ಲಿಸ ಬಾರದು.

13. ಹಾರ್ನ್ ಶಬ್ದವನ್ನು ಎಚ್ಚರಿಕೆ ಕೊಡುವುದಕ್ಕಾಗಿ ಮಾಡ ಬೇಕೇ ಹೊರತು ಜನರನ್ನು ಹೆದರಿಸುವುದಕ್ಕಾಗಿ ಮಾಡಕೂಡದು. ಆವಶ್ಯಕವಿದ್ದಾಗ ಮಾತ್ರ ಮಾಡಬೇಕು.

14. ನಿಧಾನವಾಗಿ ಚಲಿಸುತ್ತಿರುವ ವಾಹನದ ಮುಂದೆ ಹೋಗ ಬೇಕಾದಲ್ಲಿ ಅದರ ಬಲಭಾಗಕ್ಕೆ ಹಾಯ್ದು ಮುಂದೆ ಹೋಗಬೇಕು.

15. ವಾಹನಗಳನ್ನು ಸಮರ್ಪಕವಾಗಿ ನಡೆಯಿಸುವವರಿಗೆ ಮಾತ್ರ ನಡೆಯಿಸತಕ್ಕ ಲೈಸೆನ್ಸ್‌ಗಳು ಕೊಡಲ್ಪಡಬೇಕು.

## ಪ್ರಶ್ನೆಗಳು

1. ಕಾರು ಮೊದಲಾದುವುಗಳನ್ನು ಹತ್ತುವಾಗ ನೆನಪಿನಲ್ಲಿಡಬೇಕಾದ ನಿಯಮಗಳಾವುವು?
2. ಇಳಿಯುವಾಗ ಗಮನಿಸಬೇಕಾದ ಅಂಶಗಳಾವುವು?
3. ವಾಹನಗಳನ್ನು ನಡೆಯಿಸುವವರ ಅವಧಾನವನ್ನು ಕೆಡಿಸಬಾರದು. ಏಕೆ?
4. ಕೆಳಗೆ ಕೊಟ್ಟಿರುವ ವಾಕ್ಯಗಳಲ್ಲಿ ಬಿಟ್ಟಿರುವ ಸರಿಯಾದ ಕಾರಣ ಗಳನ್ನು ಭರ್ತಿಮಾಡಿರಿ:—
   (1) ಕಾರು ಮೊದಲಾದ ವಾಹನಗಳನ್ನು ಹೊರಡಿಸುವುದಕ್ಕೆ ಮುಂಚೆ ಬ್ರೇಕುಗಳನ್ನು ಪರೀಕ್ಷಿಸಬೇಕು; ಕಾರಣ ವೇನೆಂದರೆ....
   (2) ವಾಹನಗಳನ್ನು ನಿಲ್ಲಿಸತಕ್ಕ ಸ್ಥಳಗಳಲ್ಲಿ ಮಾತ್ರ ಅವುಗಳನ್ನು ಬಿಡಬೇಕು; ಕಾರಣವೇನೆಂದರೆ....
   (3) ಎತ್ತು, ಹಸು ಮೊದಲಾದ ಪ್ರಾಣಿಗಳು ಬರುತ್ತಿರುವಾಗ ಅತಿಶಯವಾದ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕು; ಕಾರಣವೇನೆಂದರೆ....

(4) ವಾಹನಗಳು ಸಂಚಾರದಲ್ಲಿರುವಾಗ ನಾಟಕ, ಸಿನೆಮಾ ಚೀಟಿಗಳನ್ನು ಹಂಚುವ ಪದ್ಧತಿಯನ್ನು ನಿಲ್ಲಿಸಬೇಕು; ಕಾರಣವೇನೆಂದರೆ....

(5) ಬಸ್ಸು ನಿಲ್ಲುವವರೆಗೂ ಇಳಿಯಲು ಯತ್ನಿಸಬಾರದು; ಕಾರಣವೇನೆಂದರೆ....

5. ಯಾವಾಗಲಾದರೂ ಬಸ್ಸಿನಲ್ಲಿ ಪ್ರಯಾಣಮಾಡಿದ್ದರೆ ಕೆಳಗೆ ತಿಳಿಸುವುದನ್ನುಪಯೋಗಿಸಿಕೊಂಡು ಒಂದು ಪ್ರಬಂಧವನ್ನು ಬರೆಯಿರಿ. ನಕ್ಷೆ.... ಹೊರಟ ಸ್ಥಳ......ಮುಟ್ಟಿದ ಸ್ಥಳ...... ಮಧ್ಯದಲ್ಲಿರುವ ರಸ್ತೆಗಳು....ಕಾಲ....ಬಸ್ ಛಾರ್ಜು ....ಹೋಗುತ್ತಿರುವಾಗ ಕಣ್ಣಿಗೆ ಬಿದ್ದ ಮುಖ್ಯವಾದ ಕಟ್ಟಡ ಮೊದಲಾದುವುಗಳು ಮತ್ತು ಗಮನಾರ್ಹವಾದ ಇತರ ವಿಷಯಗಳು.

6. ಒಂದು ಗ್ಯಾಲನ್ ಪೆಟ್ರೋಲಿನ ಸಹಾಯದಿಂದ ಒಂದು ಕಾರು 25 ಮೈಲಿಗಳ ವರೆಗೆ ಸಂಚಾರಮಾಡುತ್ತದೆ. $2\frac{3}{4}$ ಗ್ಯಾಲನ್ ಪೆಟ್ರೋಲಿನ ಸಹಾಯದಿಂದ ಎಷ್ಟು ಮೈಲಿಗಳವರೆಗೆ ಸಂಚಾರ ಮಾಡುತ್ತದೆ?

7. ನಿಮ್ಮ ಶಾಲೆಯು ನಿಮ್ಮ ಮನೆಯಿಂದ $3\frac{1}{2}$ ಮೈಲಿ ದೂರದಲ್ಲಿದೆ; ಘಂಟೆಗೆ 14 ಮೈಲಿಯಂತೆ ಹೋಗುವ ಬಸ್ಸಿನಲ್ಲಿ ನೀವು ಪ್ರಯಾಣ ಮಾಡಿದರೆ ಎಷ್ಟು ಹೊತ್ತಿನಲ್ಲಿ ಶಾಲೆಯನ್ನು ಸೇರುವಿರಿ?

# ನಾಲ್ಕನೆಯ ಅಧ್ಯಾಯ

## ಎಚ್ಚರಿಕೆಯನ್ನು ಸೂಚಿಸುವ ಬೋರ್ಡು ಮೊದಲಾದುವು

ಪಾದಚಾರಿಗಳಾಗಲೀ ಅಥವಾ ವಾಹನ ನಡೆಯಿಸುವವರಾಗಲೀ ಸದಾ ಸಮರ್ಪಕವಾಗಿ ನಡೆದಲ್ಲಿ ಅಥವಾ ವಾಹನಗಳನ್ನು ನಡೆಯಿಸಿದಲ್ಲಿ ಎಚ್ಚರಿಕೆ ಮೊದಲಾದುವುಗಳನ್ನು ಸೂಚಿಸುವ ಬೋರ್ಡುಗಳು ಅನಾವಶ್ಯಕ ವೆಂದು ಹೇಳಬೇಕಾಗುತ್ತದೆ. ಆದರೆ ಸದ್ಯಃ ಪಟ್ಟಣಗಳಲ್ಲಾಗಲೀ ಅಥವಾ ಗ್ರಾಮಗಳಲ್ಲಾಗಲೀ ಜಾಗ್ರತೆಯಾಗಿ ಸಂಚಾರಮಾಡುವ ಮೋಟಾರು ಕಾರು, ಬಸ್ಸು, ಲಾರಿ ಮತ್ತು ಸೈಕಲ್ಲುಗಳೂ, ನಿಧಾನವಾಗಿ ಹೋಗುವ ಕುದುರೆ ಗಾಡಿಗಳು, ಎತ್ತಿನ ಗಾಡಿಗಳು, ಕುದುರೆ ಸವಾರಿ ಮಾಡುವವರು ಮತ್ತು ಪಾದಚಾರಿಗಳು, ರಸ್ತೆಗಳಲ್ಲಿ ಹೆಚ್ಚಾಗಿ ಹೋಗಿ ಬರುವುದನ್ನು ನೋಡುತ್ತೇವೆ. ಹೀಗಿರುವುದರಿಂದ ಅಪಾಯಕರವಾದ ಸ್ಥಳಗಳಲ್ಲಿ ವಾಹನಗಳು ಆಕಸ್ಮಿಕವಾಗಿ ಸಂಧಿಸಿದಲ್ಲಿ ಅಥವಾ ಢಿಕ್ಕಿ ಹೊಡೆದಲ್ಲಿ ಅನೇಕ ಅನರ್ಥಗಳು ಆಗಬಹುದು. ಆದುದರಿಂದ ಇವುಗಳನ್ನು ಕಡಮೆ ಮಾಡುವುದಕ್ಕೋಸ್ಕರ ಕಾಯಂ ಆಗಿ ಅಪಾಯಕರವಾದ ಸ್ಥಳಗಳಲ್ಲಿ ಎಚ್ಚರಿಕೆಯನ್ನು ಸೂಚಿಸುವ ಬೋರ್ಡು ಮೊದಲಾದುವುಗಳನ್ನು ಇಟ್ಟಿರುತ್ತಾರೆ. ಎಲ್ಲ ದೇಶಗಳಲ್ಲಿ ಒಂದೇ ವಿಧವಾದ ಬೋರ್ಡು ಮೊದಲಾದುವುಗಳನ್ನು ಉಪಯೋಗಿಸುತ್ತಿರುವುದಿಲ್ಲವಾದುದರಿಂದ ಇಲ್ಲಿ ಮಾದರಿಗಾಗಿ ಕೆಲವನ್ನು ಮಾತ್ರ ಸೂಚಿಸಿದೆ:—

(ಅ) 1. ಅಪಾಯವನ್ನು ಸೂಚಿಸುವುದು. ನೆಲದಿಂದ 9 ಅಡಿ ಉದ್ದವಿರುವ ಕಂಭದಮೇಲೆ 18 ಇಂಚು ಉಳ್ಳ (ಪ್ರತಿಬಾಹು) ಕೆಂಪಗಿರುವ ತ್ರಿಕೋಣ.

2. ರಸ್ತೆಯು ಸೊಟ್ಟ ಸೊಟ್ಟಾಗಿರುತ್ತದೆ.

3. ಬಲಕ್ಕೆ ಅಥವಾ ಎಡಕ್ಕೆ ತಿರುಗಬೇಕು.

4. ಶಾಲೆಯು ಇರುವ ಪ್ರದೇಶ.

5. ಇಕ್ಕಟ್ಟಾದ ಸೇತುವೆ— ಇವೇ ಮೊದಲಾದುವುಗಳು.

(b) ಜಾಗ್ರತೆಯಾಗಿ ಸಂಚಾರಮಾಡುವ ಮೋಟಾರು ಮತ್ತು ಇತರ ವಾಹನಗಳನ್ನು ನಡೆಯಿಸುವವರಿಗೋಸ್ಕರ ಕೆಲವು ಬೋರ್ಡು ಗಳನ್ನು ಇಟ್ಟಿರುತ್ತಾರೆ. ಇವುಗಳಲ್ಲಿ ಮುಖ್ಯವಾದುವು:—

1. ವೇಗದ ಅವಧಿಯನ್ನು ಸೂಚಿಸುವುದು (Speed limit).

2. ನಿರ್ದಿಷ್ಟವಾದ ತೂಕವುಳ್ಳ ವಾಹನಗಳ ಸಂಚಾರಕ್ಕೆ ಈ ರಸ್ತೆಯು ಮುಚ್ಚಲ್ಪಟ್ಟಿದೆ.

3. ವಾಹನಗಳ ಸಂಚಾರಕ್ಕೆ ಈ ರಸ್ತೆಯು ಮುಚ್ಚಲ್ಪಟ್ಟಿದೆ.

4. ಈ ಸ್ಥಳದಲ್ಲಿ ಕಾರುಗಳನ್ನು ನಿಲ್ಲಿಸಿಬಿಡಬಾರದು.

5. ಈ ಸ್ಥಳದಲ್ಲಿ ಮಾತ್ರ ನಿಲ್ಲಿಸಬೇಕು.

ರಸ್ತೆಗಳಮೇಲೆ ಪಾದಚಾರಿಗಳು ದಾಟುವುದಕ್ಕೋಸ್ಕರ, ವಾಹನ ಗಳನ್ನು ನಿಲ್ಲಿಸುವುದಕ್ಕೋಸ್ಕರ ಗುರ್ತಿಸಿ ಗೆರೆಗಳನ್ನು (Lines) ಹಾಕಿರುತ್ತಾರೆ.

ಈ ಬೋರ್ಡು ಮೊದಲಾದುವುಗಳು ಪಾದಚಾರಿಗಳ, ವಾಹನ ನಡೆಯಿಸುವವರ ಮತ್ತು ಇತರರ ಉಪಯೋಗಕ್ಕಾಗಿ ಇರುವುದರಿಂದ ಇವುಗಳನ್ನು ಯಾವ ವಿಧದಲ್ಲಿಯೂ ಹಾಳುಮಾಡುವುದನ್ನಾಗಲೀ, ಕೆಡಿಸುವುದನ್ನಾಗಲೀ ಯತ್ನಿಸಬಾರದು. ಸ್ಕೂಲ್ ಪೆಟ್ರೋಲುಗಳು ಮತ್ತು ಬಾಲಚಮೂಗಳು ಆಗಾಗ್ಗೆ ಇವುಗಳನ್ನು ಪರೀಕ್ಷಿಸಿ ಸಮರ್ಪಕ ವಾಗಿವೆಯೋ ಇಲ್ಲವೋ ಎಂಬುದನ್ನು ಕಂಡುಹಿಡಿದು, ಸಮರ್ಪಕವಾಗಿಲ್ಲ ದಿರುವಾಗ ಪೋಲೀಸಿನವರಿಗೆ ತಿಳಿಸಬೇಕು. ಈ ಬೋರ್ಡ್ ಮೊದಲಾದು ವುಗಳನ್ನು ಇಡುವ ಜವಾಬ್ದಾರಿಯು ಸರ್ಕಾರದವರ ಮೇಲೂ ಮತ್ತು ಸ್ಥಳೀಯ ಸಂಸ್ಥೆಗಳವರ ಮೇಲೂ ಬಿದ್ದಿರುತ್ತದೆ.

ಸೈಕಲ್ ಸವಾರಿಮಾಡುವವರೂ, ಜಾಗ್ರತೆ ಹೋಗುವ ವಾಹನ ಗಳನ್ನು ನಡೆಯಿಸುವವರೂ ಸಹ ಗೊತ್ತಾದ ಕೈ ಸಂಜ್ಞೆಗಳನ್ನು ಸಕಾಲ ದಲ್ಲಿ ಸರಿಯಾಗಿ ಕೊಡಬೇಕಾಗಿರುತ್ತದೆ. ಮುಖ್ಯವಾದುವುಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ:—

1. ನಾನು ನಿಲ್ಲಿಸುತ್ತೇನೆ.



ಚಿತ್ರ 9

2. ಬಲಕ್ಕೆ ತಿರುಗುತ್ತೇನೆ.



ಚಿತ್ರ 10

3. ಎಡಕ್ಕೆ ತಿರುಗುತ್ತೇನೆ.



ಚಿತ್ರ 11

4. ನಾನು ನಿಧಾನವಾಗಿ ಹೋಗುತ್ತೇನೆ.



ಚಿತ್ರ 12

5. ನನ್ನ ಬಲಗಡೆ ಹಾದುಹೋಗಲಿ.



ಚಿತ್ರ 13

ಈ ಕೈ ಸಂಜ್ಞೆಗಳನ್ನು ತೋರಿಸುವಾಗ ಬಹಳ ಜಾಗರೂಕರಾಗಿರಬೇಕು. ತಪ್ಪು ಸಂಜ್ಞೆಗಳನ್ನು ಕೊಡುವುದರಿಂದ ಅನೇಕವೇಳೆ ಅನೇಕ ಅನರ್ಥಗಳು ಸಂಭವಿಸುವುವು. ಮಳೆಗಾಲದಲ್ಲಿ ನಿಧಾನವಾಗಿ ವಾಹನಗಳನ್ನು ನಡೆಯಿಸಬೇಕು. ಕಾರಿನಲ್ಲಿರುವ ಕನ್ನಡಿಯನ್ನುಪಯೋಗಿಸಬೇಕು; ಇದರಿಂದ ಹಿಂದೆ ಬರುತ್ತಿರುವ ವಾಹನಗಳನ್ನು ತಿಳಿಯಬಹುದು.

ಹಾರ್ನ್ ಎಂಬುದೂ ಎಲ್ಲ ಮೋಟಾರು ವಾಹನಗಳಲ್ಲಿರುತ್ತದೆ. ಇದನ್ನು ದುರುಪಯೋಗ ಮಾಡಬಾರದು; ಹೀಗೆ ಮಾಡುವುದರಿಂದ ಅನೇಕ ಅನರ್ಥಗಳು ಆಗುತ್ತವೆ. ಕೆಲವು ದೊಡ್ಡ ಪಟ್ಟಣಗಳಲ್ಲಿ ರಾತ್ರಿ ಗೊತ್ತಾದ ಕಾಲದಲ್ಲಿ ಹಾರ್ನನ್ನು ಉಪಯೋಗಿಸಕೂಡದೆಂದು ವಿಧಾಯಕಮಾಡಿರುತ್ತಾರೆ. (ಉದಾಹರಣೆಗಾಗಿ: ಬೊಂಬಾಯಿ–ಕೋಟೆ ಪ್ರದೇಶ—ರಾತ್ರಿ 11 ರಿಂದ ಪ್ರಾತಃಕಾಲ 6 ಘಂಟೆಯವರೆಗೆ)— ಇಂತಹ ಪ್ರದೇಶಕ್ಕೆ "Silence zone" ಎಂದು ಹೆಸರು.

**ಕೈ ಸಂಜ್ಞೆಗಳಲ್ಲದೆ ಇತರ ಸಂಕೇತಗಳಿರುವುವು**

1. ಮೋಟಾರು ಕಾರು ಹಾರ್ನ್.
2. ಸೈಕಲ್ ಹಾರ್ನ್ ಅಥವಾ ಬೆಲ್.
3. ದಿಕ್ಕುಗಳನ್ನು ತೋರಿಸುವ ಸಾಧನ (Direction indicator).

4. ಬ್ರೇಕ್, ಲೈಟ್.

5. ಪೋಲೀಸಿನವರು, ಬಾಲಚಮೂಗಳು ಮತ್ತು ಇತರರು ಉಪಯೋಗಿಸುವ ವಿಸಲ್.

**ಟ್ರಾಫಿಕ್ ಕೈ ಸಂಜ್ಞೆಗಳು**

ಮುಖ್ಯವಾದುವುಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ:—

1. ಎದುರಿಗೆ ಬರುವ ಗಾಡಿಯನ್ನು ನಿಲ್ಲಿಸುವ ಸಂಜ್ಞೆ. (ಚಿತ್ರ 14)



ಚಿತ್ರ 14



ಚಿತ್ರ 15

2. ಹಿಂದುಗಡೆಯಿಂದ ಬರುವ ಗಾಡಿಯನ್ನು ನಿಲ್ಲಿಸುವ ಸಂಜ್ಞೆ. (ಚಿತ್ರ 15)

3. ಮುಂದುಗಡೆಯಿಂದಲೂ, ಹಿಂದುಗಡೆಯಿಂದಲೂ ಏಕಕಾಲದಲ್ಲಿ ಬರುವ ಗಾಡಿಗಳನ್ನು ನಿಲ್ಲಿಸುವ ಸಂಜ್ಞೆ. (ಚಿತ್ರ 16)



ಚಿತ್ರ 16

4. ನಿಲ್ಲಿಸಿದ ಗಾಡಿಗಳನ್ನು ಮುಂದಕ್ಕೆ ಸಾಗಬಹುದೆಂಬುದನ್ನು ಸೂಚಿಸುವ ಸಂಜ್ಞೆ. (ಚಿತ್ರ 17)

ವಾಹನ ಮೊದಲಾದುವುಗಳನ್ನು ನಿಲ್ಲಿಸುವ ದೀಪಗಳು (ಕೆಂಪು ಮತ್ತು ಹಸುರು).

ಕೆಲವು ಪಟ್ಟಣಗಳಲ್ಲಿ ರಸ್ತೆಗಳು ಸಂಧಿಸುವ ಸ್ಥಳಗಳಲ್ಲಿ ಆಟೊಮ್ಯಾಟಿಕ್ ಟ್ರಾಫಿಕ್ ಸಂಜ್ಞೆಗಳನ್ನು ಏರ್ಪಡಿಸಿರುತ್ತಾರೆ. ಪೋಲೀಸಿನವರು ಕೊಡುವ ಕೈ ಸಂಜ್ಞೆಗಳನ್ನು ಪರಿಪಾಲಿಸುವಂತೆ ಇವುಗಳನ್ನು ವಿಚಾರಮಾಡದೆ ಪಾಲಿಸಬೇಕು.



ಚಿತ್ರ 17

ಕೆಂಪು ದೀಪವು 'ನಿಲ್ಲು' ಎಂಬುದನ್ನು ಸೂಚಿಸುತ್ತದೆ. ಕೆಂಪು ಮತ್ತು ಹಳದಿ ಒಟ್ಟಿಗೆ ಇರುವಲ್ಲಿ ಅದು ಹೊರಡುವುದಕ್ಕೆ ಸಿದ್ಧವಾಗಿರಬೇಕೆಂಬುದನ್ನು ಸೂಚಿಸುತ್ತದೆ. ಹಸುರು ದೀಪವು ಕಾಣುವವರೆಗೆ ಮುಂದಕ್ಕೆ ಹೋಗಬಾರದು.

## ಪ್ರಶ್ನೆಗಳು

1. ತಪ್ಪು ಕೈ ಸಂಜ್ಞೆಗಳನ್ನು ಕೊಡಬಾರದು. ಕಾರಣವೇನು?
2. ನಮ್ಮ ದೇಶದಲ್ಲಿ ಪೋಲೀಸಿನವರು ಉಪಯೋಗಿಸುತ್ತಿರುವ ಕೈ ಸಂಜ್ಞೆಗಳಲ್ಲಿ ಮೂರನ್ನು ಚಿತ್ರದ ಮೂಲಕ ಗುರ್ತಿಸಿ. ಅವುಗಳನ್ನು ಯಾವಾಗ ಉಪಯೋಗಿಸಬೇಕೆಂಬುದನ್ನು ಬರೆಯಿರಿ?
3. ನಮ್ಮ ದೇಶದಲ್ಲಿ ರಿಜಿಸ್ಟ್ರೇಷನ್ ನಂಬರ್ ತಗಡಿನಮೇಲೆ ಬರೆದಿರುವ ಅಕ್ಷರಗಳಾವುವು?
4. ನೀವು ಎಷ್ಟು ತರಹ ರಸ್ತೆಗಳನ್ನು ನೋಡಿರುವಿರಿ? ಇವುಗಳಿಂದಾಗುವ ಪ್ರಯೋಜನಗಳಾವುವು?

## ಐದನೆಯ ಅಧ್ಯಾಯ

## ಮನೆಗಳಲ್ಲಿ ಪ್ರಾಣರಕ್ಷಣೆ (Home Safety)

ನಾಗರಿಕತೆಯು ಅಭಿವೃದ್ಧಿಯಾದಹಾಗೆಲ್ಲಾ ಸಮಾಜದ ಪ್ರತಿಯೊಂದು ಮುಖದಲ್ಲಿ ಅನೇಕ ಬದಲಾವಣೆಗಳು ಆಗುತ್ತಲೇ ಇರುವುವು. ಇದನ್ನನುಸರಿಸಿ ನಮ್ಮ ದೇಶದಲ್ಲಿಯೂ ಸಹ ಪೂರ್ವಸಂಪ್ರದಾಯಗಳು ಮಾಯವಾಗಿ ಹೊಸ ಪದ್ಧತಿಗಳು ಪ್ರಾರಂಭವಾಗಿರುವುವು. ಈ 20 ನೆಯ ಶತಮಾನವನ್ನು 'ವಿಜ್ಞಾನಗಳ' ಶತಮಾನವೆಂದು ಕೆಲವರು ಹೇಳುತ್ತಿರುವರು. ವಿಜ್ಞಾನಶಾಸ್ತ್ರಗಳ ಪ್ರಭೆಯು ಎಲ್ಲೆಡೆಗಳಲ್ಲಿಯೂ ಕಂಡುಬರುತ್ತಿರುವುದು. ವಿದ್ಯುಚ್ಛಕ್ತಿ–ಸ್ಟೋವ್ ಮೊದಲಾದುವುಗಳನ್ನು ಜನರು ಹೆಚ್ಚಾಗಿ ಉಪಯೋಗಿಸುತ್ತಿರುವರು. ಸಂಸಾರದ ಕರ್ತವ್ಯಗಳನ್ನು ಸುಲಲಿತವಾಗಿಯೂ, ಸುಖವಾಗಿಯೂ ನಿರ್ವಹಿಸಿಕೊಂಡು ಅಪಾಯಗಳಿಗೆ ಈಡಾಗದಂತಿರಬೇಕಾದರೆ ಕೆಲವು ಮುಖ್ಯ ಸಂಗತಿಗಳನ್ನು ಪ್ರತಿ ಹೆಂಗಸು, ಗಂಡಸು ತಿಳಿದುಕೊಳ್ಳಬೇಕಾಗಿರುತ್ತದೆ.

ನಮ್ಮ ದೇಶದಲ್ಲಿ ಅಡಿಗೆಗೂ ಪದಾರ್ಥಗಳನ್ನು ಬಿಸಿಮಾಡುವುದಕ್ಕೂ ಸಾಧಾರಣವಾಗಿ ಕಟ್ಟಿಗೆ–ಇದ್ದಿಲು ಮತ್ತು ಸ್ಟೋವುಗಳನ್ನು ಉಪಯೋಗಿಸುತ್ತಾರೆ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮಾತ್ರ ಗ್ಯಾಸ್ ಮತ್ತು ವಿದ್ಯುಚ್ಛಕ್ತಿಯನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಈಚೆಗೆ ಹಳ್ಳಿಗಳಲ್ಲಿಯೂ ಸಹ ವಿದ್ಯುಚ್ಛಕ್ತಿಯನ್ನುಪಯೋಗಿಸಲು ಪ್ರಾರಂಭಿಸಿರುವರು. ವಿದ್ಯುಚ್ಛಕ್ತಿಯ ವಿಷಯದಲ್ಲಿ ಸರಿಯಾದ ತಿಳಿವಳಿಕೆಯಿಲ್ಲದೆ ಅನೇಕವೇಳೆ ಅಪಾಯವಾಗಿ ಮರಣಗಳು ಸಂಭವಿಸಿರುತ್ತವೆ.

ಬೆಳಕಿಗೋಸ್ಕರ ಮೇಣದಬತ್ತಿ, ಎಣ್ಣೆಯದೀಪ, ಪೆಟ್ರೊಮ್ಯಾಕ್ಸ್ ದೀಪ, ವಿದ್ಯುಚ್ಛಕ್ತಿಯ ದೀಪ— ಇವುಗಳನ್ನುಪಯೋಗಿಸುತ್ತಿರುವರು. ಅಪಾಯಗಳಿಗೆ ಈಡಾಗದೆ ಇವುಗಳನ್ನು ಉಪಯೋಗಿಸಬೇಕಾದರೆ ಕೆಳಗೆ ತಿಳಿಸಿರುವ ಅಂಶಗಳಿಗೆ ಗಮನ ಕೊಡಬೇಕಾಗಿರುತ್ತದೆ:—

### I. ಮೇಣದ ಬತ್ತಿ

1. ಸಾಧಾರಣವಾಗಿ ಉರುಳದೇ ಇರತಕ್ಕ ಮತ್ತು ಮೇಣದ ಬತ್ತಿಯು ಭದ್ರವಾಗಿ ಕಚ್ಚಿಕೊಳ್ಳತಕ್ಕ ಮೇಣದ ಬತ್ತಿಯ ಕಂಬವನ್ನು ಉಪಯೋಗಿಸಬೇಕು.

2. ಬಾಟಲಿನಲ್ಲಿಯಾಗಲೀ ಹಲಗೆಯಮೇಲಲ್ಲಾಗಲೀ ಉರಿಯುವ ಬತ್ತಿಯನ್ನು ಎಂದಿಗೂ ಇಡಬಾರದು.

3. ಪರದೆ ಅಥವಾ ಜಾಗ್ರತೆಯಾಗಿ ಬೆಂಕಿಯು ತಗಲತಕ್ಕ ಬಟ್ಟೆ, ಇವುಗಳ ಹತ್ತಿರದಲ್ಲಿ ಉರಿಯುತ್ತಿರುವ ಮೇಣದ ಬತ್ತಿಯನ್ನು ಇಡಕೂಡದು.

4. ಬಟ್ಟೆಗಳು ಇರತಕ್ಕ ಸ್ಥಳದಲ್ಲಿ ಉರಿಯುತ್ತಿರುವ ಮೇಣದ ಬತ್ತಿಯನ್ನು ತೆಗೆದುಕೊಂಡುಹೋಗಬಾರದು.

**II. ಲ್ಯಾಂಪುಗಳು ಮತ್ತು ಲಾಂದ್ರಗಳು**

1. ಲ್ಯಾಂಪು ಮತ್ತು ಲಾಂದ್ರ ಇವುಗಳ ಭಾಗಗಳನ್ನೆಲ್ಲಾ ಸ್ವಚ್ಛವಾಗಿಟ್ಟಿರಬೇಕು. ಆಗಾಗ್ಗೆ ಬರ್ನರನ್ನು ಸಾಬೂನಿನ ನೀರಿನಲ್ಲಿ ಕುದಿಸಬೇಕು.

2. ಪೆಟ್ರೋಲ್ ಮತ್ತು ಇತರ ಎಣ್ಣೆಯ ಲ್ಯಾಂಪುಗಳನ್ನು ಸಮರ್ಪಕವಾದ ಮತ್ತು ಉಪಯೋಗಿಸಲು ಯೋಗ್ಯವಾದ ಸ್ಥಿತಿಯಲ್ಲಿಟ್ಟಿರಬೇಕು.

3. ಲ್ಯಾಂಪು ಮತ್ತು ಲಾಂದ್ರ ಇವುಗಳಿಗೆ ಹಗಲಿನಲ್ಲಿ ಎಣ್ಣೆಯನ್ನು ಹಾಕಬೇಕು; ಮತ್ತು ಬರ್ನರು ಮೊದಲಾದುವುಗಳನ್ನು ಬಿಗಿಯಾಗಿ ತಿರುಗಿಸಬೇಕು.

4. ಲ್ಯಾಂಪು ಉರುಳದ ರೀತಿಯಲ್ಲಿ ಸರಿಯಾದ ಸ್ಥಳದಲ್ಲಿಡಬೇಕು.

5. ಜಾಗ್ರತೆಯಾಗಿ ಬೆಂಕಿ ತಗಲುವ ಪರದೆ ಮತ್ತು ಇತರ ಸಾಮಾನುಗಳ ಹತ್ತಿರ ಲ್ಯಾಂಪನ್ನು ಇಡಬಾರದು.

6. ಉರಿಯುತ್ತಿರುವ ಲ್ಯಾಂಪನ್ನು ಬಹಳ ಹೊತ್ತಿನವರೆಗೆ ನೋಡದೆ ಇರಬಾರದು. ದೀಪವನ್ನು ಆರಿಸದೆ ಮನೆಯನ್ನು ಎಂದಿಗೂ ಬಿಡಬಾರದು.

7. ವ್ಯವಸಾಯ ಕ್ಷೇತ್ರಗಳಲ್ಲಿ ಎಣ್ಣೆಯ ಲಾಂದ್ರಕ್ಕಿಂತಲೂ ಫ್ಲಾಷ್ ಲೈಟ್ ಅಥವಾ ಬ್ಯಾಟರಿ ಲಾಂದ್ರವು ಹೆಚ್ಚು ಉಪಯೋಗವಾಗುತ್ತವೆ.

8. ಲಾಂದ್ರಗಳ ಬೆಳಕಿನಲ್ಲಿ ಓದುವಾಗ ಕಣ್ಣಿಗೆ ಅಪಾಯವಾಗದಂತೆ ನೋಡಿಕೊಳ್ಳಬೇಕು.

### III. ಸ್ಟೋವು ಮತ್ತು ಲ್ಯಾಂಪುಗಳು

ಇವುಗಳನ್ನುಪಯೋಗಿಸುವಾಗ ಅನೇಕ ಅಪಾಯುಗಳು ಆಗುವ ಸಂಭವವಿರುತ್ತವೆ. ಆದುದರಿಂದ ಈ ಕೆಳಗೆ ತಿಳಿಸಿರುವ ಅಂಶಗಳಿಗೆ ಗಮನಕೊಡಬೇಕು :—

1. ಲ್ಯಾಂಪು ಮತ್ತು ಸ್ಟೋವ್ ಇವುಗಳನ್ನು ಆಗಾಗ್ಗೆ ಸ್ವಚ್ಛ ಮಾಡಿ ಸರಿಯಾದ ಸ್ಥಿತಿಯಲ್ಲಿಡಬೇಕು. 'ನಾಜಲ್' ಎಂಬುದನ್ನು ಪ್ರತ್ಯೇಕವಾದ ಸೂಜಿಯನ್ನುಪಯೋಗಿಸಿ ಶುಭ್ರವಾಗಿಟ್ಟಿರಬೇಕು. 'ಪ್ರೆಷರ್' ಗಾಜನ್ನು ಉಪಯೋಗಿಸಿದಲ್ಲಿ ಅದನ್ನು ಸ್ವಚ್ಛವಾಗಿಟ್ಟಿರಬೇಕು. ಆಗಾಗ್ಗೆ ಸರಿಯಾದ ಯೋಗ್ಯತೆಪಡೆದವನಿಂದ ಇವು ಪರೀಕ್ಷಿಸಲ್ಪಡಬೇಕು. ಸವೆದುಹೋದ ಸಾಮಾನುಗಳನ್ನು ತೆಗೆದು ಅವುಗಳ ಸ್ಥಳದಲ್ಲಿ ಸರಿಯಾದ ಸಾಮಾನುಗಳನ್ನು ಇಡಬೇಕು.

2. ಶುಭ್ರವಾದ ಎಣ್ಣೆಯಿಂದ $\frac{3}{4}$ ಭಾಗ ಮಾತ್ರ ತುಂಬಬೇಕು; ಬಾಕಿ ಭಾಗವನ್ನು ಗಾಳಿಗೋಸ್ಕರ ಬಿಡಬೇಕು.

3. ಸ್ಟೋವನ್ನು 3 ಅಡಿ ಎತ್ತರವಿರುವ ಸಿಮೆಂಟಿನ ಜಗಲಿ ಮೇಲಾಗಲೀ ಅಥವಾ ಮೇಜಿನ ಮೇಲಾಗಲೀ ಇಡಬೇಕು.

4. ನೆಲದಮೇಲೆ ಎಂದಿಗೂ ಇಡಬಾರದು. ಕಾರಣವೇನೆಂದರೆ, ಹತ್ತಿರ ಕುಳಿತಿರುವವರ ಬಟ್ಟೆಗಳಿಗೆ ಬೆಂಕಿಯು ಜಾಗ್ರತೆ ತಗಲುವ ಸಂಭವವು ಇರುತ್ತದೆ.

5. ಸಾಮಾನಿಡುವ ಹಲಗೆಯ (Shelf) ಕೆಳಗೆ ಎಂದಿಗೂ ಸ್ಟೋವನ್ನು ಇಡಬಾರದು. ಕಾರಣವೇನೆಂದರೆ, ಹಲಗೆಯಮೇಲೆ ಇರುವ ಸಾಮಾನುಗಳನ್ನು ತೆಗೆದುಕೊಳ್ಳುವುದಕ್ಕೆ ಹೋದಾಗ ಉಟ್ಟಿರುವ ಬಟ್ಟೆಗಳು ಬೆಂಕಿಗೆ ತಗಲುವ ಸಂಭವವು ಇರುತ್ತದೆ.

6. ಒಳ್ಳೆಯ 'ಮೆಥಿಲೇಟೆಡ್' ಸ್ಪಿರಿಟ್ಟನ್ನು ಉಪಯೋಗಿಸಿ ಬರ್ನರನ್ನು ಕಾಯಿಸಬೇಕು. ಕಾಡಿಗೆಯನ್ನುಂಟುಮಾಡುವ ಯಾವ

ಪದಾರ್ಥವನ್ನೂ ಉಪಯೋಗಿಸಬಾರದು. ಸೀಮೆ ಎಣ್ಣೆಯನ್ನು ಎಂದಿಗೂ ಉಪಯೋಗಿಸಬಾರದು.

7. ನಾಜಲನ್ನು ಚೆನ್ನಾಗಿ ಕಾಯಿಸಿ ಗಾಳಿಗೋಸ್ಕರ ಇರುವ 'ವಾಲ್ವನ್ನು' ಮುಚ್ಚಿ ಗಾಳಿಯು ನಿಧಾನವಾಗಿ ಒಳಗೆ ಹೋಗುವಂತೆ ಮಾಡಬೇಕು. ನಾಜಲನ್ನು ಚೆನ್ನಾಗಿ ಕಾಯಿಸಿದಲ್ಲಿ ಸ್ಟೌವು ಚೆನ್ನಾಗಿ ಉರಿಯುತ್ತದೆ.

8. ಬೆಂಕಿಯು ಸರಿಯಾಗಿ ಉರಿಯುವುದಕ್ಕೆ ಗಾಳಿಯ ಪ್ರೆಷರು ಆವಶ್ಯಕವಾಗಿರುತ್ತದೆ.

IV. (a) **ಬೆಂಕಿಯನ್ನು ಹೊತ್ತಿಸುವುದು**

ಬೆಂಕಿಯನ್ನು ಹೊತ್ತಿಸುವುದಕ್ಕೋಸ್ಕರ ಕೆಲವುವೇಳೆ ಸೀಮೆ ಎಣ್ಣೆಯನ್ನು ಉಪಯೋಗಿಸುತ್ತಾರೆ. ಇದು ಸರಿಯಾದ ಪದ್ಧತಿಯಲ್ಲ. ಸೀಮೆ ಎಣ್ಣೆಯಲ್ಲಿ ಒಂದು ಚಿಂದಿಬಟ್ಟೆಯನ್ನು ನೆನಸಿ, ಸೌದೆಯ ಮೇಲಿಟ್ಟು ಅದನ್ನು ಹತ್ತಿಸಬೇಕು. ಉರಿಯುವ ಬೆಂಕಿಯಮೇಲೆ ಎಂದಿಗೂ ಸೀಮೆ ಎಣ್ಣೆಯನ್ನು ಸುರಿಯಲು ಯತ್ನಿಸಬಾರದು. ಈ ರೀತಿ ಮಾಡುವುದು ಬಹಳ ಅಪಾಯಕರ.

(b) **ಸೌದೆಯನ್ನು ಕತ್ತರಿಸುವುದು**

1. ಹರಿತವಾದ ಮತ್ತು ಸರಿಯಾದ ಹಿಡಿಕೆಯುಳ್ಳ ಕೊಡಲಿಯನ್ನು ಉಪಯೋಗಿಸಬೇಕು.

2. ಕತ್ತರಿಸುವ ಸ್ಥಳದಲ್ಲಿ ಒಂದು ದೊಡ್ಡ ಮರದ ತುಂಡನ್ನಿಟ್ಟು ಕೊಂಡು ಅದರಮೇಲೆ ಕತ್ತರಿಸಬೇಕಾದ ಸೌದೆಯನ್ನಿಟ್ಟು ಕತ್ತರಿಸ ಬೇಕು. ಒಂದುವೇಳೆ ಏಟು ತಪ್ಪಿದರೂ ಅಪಾಯವಾಗುವುದಿಲ್ಲ.

(c) **ಇದ್ದಿಲು**

**1.** 3 ಅಡಿ ಎತ್ತರವಿರುವ ಜಗಲಿಯಮೇಲೆ ಇದ್ದಿಲನ್ನು ಹೊತ್ತಿಸಿ ಉಪಯೋಗಿಸಬೇಕು. ಕೋಣೆಯ ಕಿಡಕಿ ಬಾಗಿಲುಗಳನ್ನು ತೆರೆಯ ಬೇಕು.

**2. ಗ್ಯಾಸ್ ಸ್ಟೌವು**

1. ಮಕ್ಕಳು ಇದನ್ನು ಮುಟ್ಟಲೇ ಕೂಡದು.

2. ಸ್ಟೋವನ್ನು ಶುಭ್ರವಾಗಿಟ್ಟಿರಬೇಕು.

3. ಅಡಿಗೆಯ ಮನೆಯಲ್ಲಿ ಧಾರಾಳವಾಗಿ ಗಾಳಿ ಬೆಳಕು ಬರುವಂತಿರಬೇಕು.

**3. ಎಲೆಕ್ಟ್ರಿಕ್ ಸ್ಟೋವು**

1. ಮಕ್ಕಳು ಸ್ವಿಚ್ ಹಾಕದಂತೆ ನೋಡಿಕೊಳ್ಳಬೇಕು.

2. ಒದ್ದೆ ಕೈಯಿಂದ ಎಂದಿಗೂ ಮುಟ್ಟಬಾರದು.

3. ಶುಭ್ರವಾಗಿಟ್ಟಿರಬೇಕು.

4. ಸ್ಟೋವನ್ನು ಹತ್ತಿಸುವಾಗ ಮತ್ತು ಅಡಿಗೆಮಾಡುವಾಗ ಧರಿಸುವ ಉಡುಪಿನ ವಿಷಯದಲ್ಲಿ ಬಹಳ ಜಾಗರೂಕರಾಗಿರಬೇಕು. ಸಡಿಲವಾದ ಮತ್ತು ತೆಳುವಾದ ಬಟ್ಟೆಗಳನ್ನು ಎಂದಿಗೂ ಧರಿಸಬಾರದು.

5. ಸುಟ್ಟ ಘಾಯಗಳಿಂದ ನರಳುತ್ತಿರುವ ಚಿಕ್ಕಮಕ್ಕಳನ್ನು ಆಗಾಗ್ಗೆ ನೋಡುತ್ತಿರುವೆವು. ಬೆಂಕಿಯ ಹತ್ತಿರ, ಸ್ಟೋವು, ಗ್ಯಾಸ್ ದೀಪ ಮೊದಲಾದುವುಗಳ ಹತ್ತಿರ ಮಕ್ಕಳನ್ನು ಸೇರಿಸಬಾರದು ಮತ್ತು ದೂರದಲ್ಲಿರುವಂತೆ ನೋಡಿಕೊಳ್ಳಬೇಕು.

6. ಸ್ಟೋವಿನ ಹತ್ತಿರ ಮಕ್ಕಳಿಗೆ ಸ್ನಾನವನ್ನು ಎಂದಿಗೂ ಮಾಡಿಸಬಾರದು. ಒಂದುವೇಳೆ ಬಿಸಿನೀರಿನ ಹಂಡೆಯು ಉರುಳಿ ಅನೇಕ ಅನರ್ಥಗಳು ಆಗಬಹುದು.

7. ಹೇಳಿದುದನ್ನು ತಿಳಿದುಕೊಳ್ಳುವ ಶಕ್ತಿಯು ಬರುವವರೆಗೂ ಮಕ್ಕಳಿಗೆ ಉರಿಯುವ ಪದಾರ್ಥದ ಹತ್ತಿರ ಹೋಗಕೂಡದೆಂದು ಕಲಿಸಬೇಕು.

8. ಅಡಿಗೆಮಾಡುವಾಗ ಭಾರವಾದ ಮತ್ತು ಬಿಗಿಯಾದ ಬಟ್ಟೆಗಳನ್ನು ಮಾತ್ರ ಧರಿಸಬೇಕು.

9. ಬೆಂಕಿಯ ರಕ್ಷಕಗಳನ್ನು (Fire-guards) ಉಪಯೋಗಿಸುವುದರಿಂದ ಅನೇಕ ವಿಪತ್ತುಗಳನ್ನು ನಿವಾರಿಸಬಹುದು.

10. ಉಕ್ಕಿನ ತಟ್ಟೆಯಮೇಲಾಗಲೀ ಅಥವಾ ಕಲ್ಲುಗಾರೆಯ ನೆಲದ ಮೇಲಾಗಲೀ ಸ್ಟೋವನ್ನಿಡಬೇಕು. ಈ ರೀತಿ ಮಾಡುವುದರಿಂದ ನೆಲವು ಸುಡುವುದಿಲ್ಲ. ನೆಲವು ಮರದಿಂದ ಮಾಡಿದ್ದಲ್ಲಿ ಈ ಎಚ್ಚರಿಕೆಯು ಆವಶ್ಯಕ.

11. ಪ್ರಿಮುಸ್ ಸ್ಟೋವು ಮೊದಲಾದುವುಗಳನ್ನು ಉಪಯೋಗಿಸುವಾಗ, ಅಡಿಗೆಮಾಡುವಾಗ, ರಕ್ಷಕವನ್ನುಪಯೋಗಿಸುವುದರಿಂದ ಅನೇಕ ತೊಂದರೆಗಳು ಸಂಭವಿಸಲು ಅವಕಾಶವಿರುವುದಿಲ್ಲ.

12. ಒಲೆಯ ಮೇಲಿನಿಂದ ಅಡಿಗೆಯ ಪಾತ್ರೆಗಳನ್ನು ಇಳಿಸುವಾಗ ಉಟ್ಟಿರುವ ಸೀರೆ, ಪಂಚೆ ಮೊದಲಾದುವುಗಳನ್ನು ಎಂದಿಗೂ ಉಪಯೋಗಿಸಬಾರದು. ಈ ರೀತಿ ಮಾಡುವುದರಿಂದ ಅನೇಕ ಅನರ್ಥಗಳು ಸಂಭವಿಸಬಹುದು.

13. ಭಾರವಾದ ಮತ್ತು ವದ್ದೆಯಾದ ಬಟ್ಟೆಯನ್ನೂ ಮತ್ತು ಹಿಡಿಕೆಯುಳ್ಳ ಪಾತ್ರೆಗಳನ್ನೂ ಉಪಯೋಗಿಸಬೇಕು.

14. ವದ್ದೆಯ ಬಟ್ಟೆಗಳನ್ನು ಒಣಗಿಸುವಾಗ ಜಾಗರೂಕರಾಗಿರಬೇಕು. ಬೆಂಕಿಯ ಹತ್ತಿರ ಎಂದಿಗೂ ಒಣಗಿಸಬಾರದು. ಒಣಗಿದ ಬಟ್ಟೆಗಳನ್ನು ಪ್ರತ್ಯೇಕವಾದ ಸ್ಥಳದಲ್ಲಿ ಮಾತ್ರ ಇಡಬೇಕು.

**V. ಬಿಸಿನೀರು ಮತ್ತು ಅಪಾಯಗಳು**

1. ಮಕ್ಕಳ ಅಜಾಗರೂಕತೆಯಿಂದ ಕೆಲವುವೇಳೆ ಬಿಸಿ ದ್ರವವು ಮೈಮೇಲೆ ಬಿದ್ದು ಗಾಯಗಳು ಆಗುವುವು. ಇದನ್ನು ತಪ್ಪಿಸಬೇಕು.

2. ಬಿಸಿನೀರಿನ ಹಂಡೆ ಅಥವಾ ಅಡಿಗೆಪಾತ್ರೆ ಮೊದಲಾದುವುಗಳನ್ನು ಮಕ್ಕಳು ಮುಟ್ಟದಂತೆ ನೋಡಿಕೊಳ್ಳಬೇಕು.

3. ಸ್ಟೋವು ಮೊದಲಾದುವುಗಳ ಹತ್ತಿರ ಮಕ್ಕಳು ಓಡಾಡದಂತೆ ನೋಡಿಕೊಳ್ಳಬೇಕು.

4. ಬಿಸಿ ಬಿಸಿ ಕಾಫಿ, ಟೀ ಮೊದಲಾದುವುಗಳು ಇರುವ ಪಾತ್ರೆಗಳನ್ನು ಮಕ್ಕಳು ಹಿಡಿದು ಎಳೆಯದಂತೆ ನೋಡಿಕೊಳ್ಳಬೇಕು.

**VI. ಅನಿಲಗಳು**

ಸೌದೆಯು ಉರಿಯುತ್ತಿರುವಾಗ ಕಾರ್ಬನ್ ಡೈಆಕ್ಸೈಡ್ ಎಂಬ ಅನಿಲವು ಉತ್ಪತ್ತಿಯಾಗುತ್ತದೆ. ಇದು ಅಪಾಯಕರವಲ್ಲದ ಅನಿಲವು. ಆದರೆ ಯಾವ ಪ್ರದೇಶದಲ್ಲಿ ಶುದ್ಧವಾದ ಗಾಳಿಯು ಕಡಮೆ ಪ್ರಮಾಣದಲ್ಲಿರುವುದೋ ಅಂತಹ ಪ್ರದೇಶದಲ್ಲಿ ಕಾರ್ಬನ್ ಮಾನಾಕ್ಸೈಡ್ ಎಂಬ ಅನಿಲವು ಉತ್ಪತ್ತಿಯಾಗುತ್ತದೆ. ಇಂತಹ ಸಂದರ್ಭಗಳು ಯಾವುವೆಂದರೆ:

1. ಕಿಡಕಿಯ ಬಾಗಿಲುಗಳು ಮುಚ್ಚಲ್ಪಟ್ಟಿರುವ ಕೋಣೆಯಲ್ಲಿ ಬೆಂಕಿಯು ಅಥವಾ ದೀಪವು ಉರಿಯುತ್ತಿರುವಾಗ;

2. ಮುಚ್ಚಲ್ಪಟ್ಟಿರುವ ಗರಾಜಿನಲ್ಲಿ ಮೋಟಾರು ಎಂಜಿನ್ ಕೆಲಸ ಮಾಡುತ್ತಿರುವಾಗ;

3. ಇಟ್ಟಿಗೆ ಮತ್ತು ಸುಣ್ಣ, ಇವುಗಳನ್ನು ಸುಡುತ್ತಿರುವಾಗ.

ಶುದ್ಧವಾದ ಗಾಳಿಯು ಬರುವುದಕ್ಕೂ ಅಶುದ್ಧವಾದ ಗಾಳಿಯು ಹೊರಗೆ ಹೋಗುವುದಕ್ಕೂ ಅವಕಾಶವನ್ನು ಕಲ್ಪಿಸಿದಲ್ಲಿ, ಈ ಅನಿಲವು ಉತ್ಪತ್ತಿಯಾಗುವುದಿಲ್ಲ; ಹಾಗಿಲ್ಲದೆ ಗಾಳಿಯು ಸಾಕಾದಷ್ಟು ಇಲ್ಲದೆ ಇದು ಬಹಳ ಹೆಚ್ಚಾದರೆ ಅಪಾಯಕರವಾಗಬಹುದು. ಸ್ನಾನಮಾಡುವ ಕೋಣೆಗೆ ಕಿಡಕಿಗಳಿಲ್ಲದೆ ಬಾಗಿಲನ್ನು ಮುಚ್ಚಿ ಸ್ನಾನಮಾಡುವ ಸಂದರ್ಭವು ಒದಗಿದಲ್ಲಿ ಬೆಂಕಿಯು ಉರಿಯುವಂತೆ ನೋಡಿಕೊಳ್ಳಬೇಕು. ಈ ಎಚ್ಚರಿಕೆಯನ್ನು ತೆಗೆದುಕೊಳ್ಳದಿದ್ದರೆ ಕಾರ್ಬನ್ ಮಾನಾಕ್ಸೈಡ್ ಎಂಬ ವಿಷವಾಯುವು ಉತ್ಪನ್ನವಾಗಿ ಜನರು ಸಾಯಲು ಅವಕಾಶವಾಗುತ್ತದೆ.

## ಕಾರ್ಬನ್ ಮಾನಾಕ್ಸೈಡ್

ಇದು ವಾಸನೆ ಇರುವುದಿಲ್ಲ. ಸೇವಿಸಿದಲ್ಲಿ ಅಪಾಯವು ಸಂಭವಿಸುತ್ತದೆ. ಒಂದುವೇಳೆ ಈ ಅನಿಲವನ್ನು ಸ್ವಲ್ಪ ಪ್ರಮಾಣದಲ್ಲಿ ಸೇವಿಸಿದರೆ, ತಲೆತಿರುಗುವುದು, ಕಾಲುಗಳಲ್ಲಿ ನಿಶ್ಶಕ್ತಿ, ಎದೆ ಜಾಗ್ರತೆ ಬಡಿದುಕೊಳ್ಳುವುದು — ಇವೇ ಮೊದಲಾದ ಚಿಹ್ನೆಗಳು ಕಂಡುಬರುವುವು. ಈ ರೀತಿ ಚಿಹ್ನೆಗಳು ಕಂಡುಬಂದಲ್ಲಿ ತಕ್ಷಣ ಶುದ್ಧವಾದ ಮತ್ತು ಶಾಖವಾದ ಗಾಳಿ ಇರುವ ಸ್ಥಳಕ್ಕೆ ಹೋಗಬೇಕು. ಶೀತವಾಗದಂತೆ ನೋಡಿಕೊಳ್ಳಬೇಕು. ಕಷ್ಟಪಟ್ಟು ಕೆಲಸಮಾಡಬಾರದು. ಒಂದುವೇಳೆ ಪ್ರಜ್ಞೆತಪ್ಪಿದಲ್ಲಿ ಕೃತಕ ಉಸಿರಾಡುವ ಸಾಧನಗಳ ಮೂಲಕ ಗಾಳಿಯನ್ನು ದೇಹಕ್ಕೆ ತುಂಬಬೇಕು. ಈ ರೀತಿ ಅರ್ಧ ಘಂಟೆಯವರೆಗೆ ಅಥವಾ ಸ್ವಾಭಾವಿಕವಾಗಿ ಉಸಿರಾಡಲು ಆಗುವವರೆಗೆ ಮಾಡಬೇಕು. ಡಾಕ್ಟರನ್ನು ಬರಮಾಡಿಕೊಳ್ಳಬೇಕು.

**VII. ಧರಿಸಿರುವ ಬಟ್ಟೆಗಳಿಗೆ ಬೆಂಕಿಯು ತಗಲಿದಾಗ ಕೆಳಗೆ ತಿಳಿಸಿರುವ ಅಂಶಗಳಿಗೆ ಗಮನ ಕೊಡಬೇಕು:—**

1. ಓಡುವುದರಿಂದ ಬೆಂಕಿಯು ಹೆಚ್ಚಾಗುತ್ತದೆ. ಆದುದರಿಂದ ನಿಧಾನವಾಗಿ ಚಲಿಸಬೇಕು.

2. ಸಾಧ್ಯವಾದಲ್ಲಿ ಜಮುಖಾನೆ, ಹಚ್ಚಡ, ಕಂಬಳಿ, ಉಣ್ಣೆಯ ಕೋಟು ಮೊದಲಾದುವುಗಳಿಂದ ದೇಹವನ್ನು ಮುಚ್ಚಿಕೊಂಡು ಬೆಂಕಿಯು ಹೆಚ್ಚಾಗದಂತೆ ನೋಡಿಕೊಳ್ಳಬೇಕು.

3. ಒಂದುವೇಳೆ ಮುಚ್ಚಿಕೊಳ್ಳುವುದಕ್ಕೆ ಕಂಬಳಿ ಮೊದಲಾದುವುಗಳು ಸಿಕ್ಕದಿರುವಾಗ ನೆಲದಮೇಲೆ ನಿಧಾನವಾಗಿ ಉರುಳಿ ಬೆಂಕಿಯನ್ನು ಆರಿಸಿಕೊಳ್ಳಬೇಕು.

4. ಎಡಗೈಯನ್ನು ಬಲಭುಜದಮೇಲೂ ಬಲಗೈಯನ್ನು ಎಡಭುಜದಮೇಲೂ ಇಟ್ಟುಕೊಳ್ಳುವುದರಿಂದ ಆಗುವ ಮೂಲೆಯ ಪ್ರದೇಶದಲ್ಲಿ ಮುಖವನ್ನಿಟ್ಟುಕೊಂಡು ಅದನ್ನು ಕಾಪಾಡಿಕೊಳ್ಳಬೇಕು.

5. ಬೆಂಕಿಯು ಉರಿಯುತ್ತಿರುವಾಗ ವಿಷವಾಯುವು ಉತ್ಪನ್ನವಾಗುವುದರಿಂದ ಅದನ್ನು ಸೇವಿಸಬಾರದು.

6. ಬೆಂಕಿಯು ತಗಲಿದ ಮನುಷ್ಯನನ್ನು ನೆಲದಮೇಲೆ ಉರುಳಿಸಬೇಕು.

**VIII. ಸುಟ್ಟ ಘಾಯಗಳು**

1. ಘಾಯಗಳಾದಕೂಡಲೇ ಆಗತಾನೆ ಸಿದ್ಧಪಡಿಸಿದ ಮತ್ತು ಮಂದವಾದ ಟೀ ಕಷಾಯವನ್ನು ದೇಹದ ಉಷ್ಣಪ್ರಮಾಣಕ್ಕೆ ಆರಿಸಿ ಸವರಬೇಕು.

2. ಡಾಕ್ಟರ್ ಬರುವವರೆಗೂ ಅಥವಾ ಆಸ್ಪತ್ರೆಗೆ ಕರೆದುಕೊಂಡು ಹೋಗುವವರೆಗೂ ಸುಟ್ಟ ಘಾಯಗಳನ್ನು ಮುಚ್ಚಬಾರದು.

3. ಒಂದುವೇಳೆ ಮುಚ್ಚಬೇಕಾದರೆ ಟೀ ಕಷಾಯದಲ್ಲಿ ಹತ್ತಿಯನ್ನು ನೆನಸಿ ಅದನ್ನು ಮುಚ್ಚಬೇಕು.

4. ಅಶುದ್ಧವಾದ ಹತ್ತಿಯನ್ನು ಘಾಯದಮೇಲೆ ಎಂದಿಗೂ ಉಪಯೋಗಿಸಬಾರದು.

**IX. (a) ವಿದ್ಯುಚ್ಛಕ್ತಿಯನ್ನುಪಯೋಗಿಸುವುದು**

ಪ್ರತಿ ದೇಶದಲ್ಲಿಯೂ ವಿದ್ಯುಚ್ಛಕ್ತಿಯನ್ನು ಹೆಚ್ಚಾಗಿ ಉಪಯೋಗಿಸಲು ಪ್ರಾರಂಭಿಸಿರುವರು. ಮೈಸೂರು ದೇಶದಲ್ಲಿಯೂ ಸಹ

ವಿದ್ಯುಚ್ಛಕ್ತಿಯನ್ನು ತಯಾರಿಸುವುದಕ್ಕೆ ಅನೇಕ ಪ್ರಯತ್ನಗಳನ್ನು ಮಾಡುತ್ತಿರುವರು. ನೈಸರ್ಗಿಕ ಸೌಕರ್ಯಗಳು ಹೆಚ್ಚಾಗಿರುವುದರಿಂದ ವಿದ್ಯುಚ್ಛಕ್ತಿಯನ್ನು ಹೆಚ್ಚಾಗಿ ತಯಾರಿಸಲು ಸಾಧ್ಯವಿರುತ್ತದೆ. ಮುಖ್ಯವಾಗಿ ದೀಪ, ಕೈಗಾರಿಕೆ, ವ್ಯವಸಾಯ ಮೊದಲಾದುವುಗಳಿಗೆ[1] ಸದ್ಯಃ ಉಪಯೋಗಿಸುತ್ತಿರುವರು. ಇವನ್ನುಪಯೋಗಿಸುವುದರಲ್ಲಿ ಕೆಳಗೆ ತಿಳಿಸಿರುವ ಅಂಶಗಳಿಗೆ ಮುಖ್ಯವಾಗಿ ಗಮನಕೊಡಬೇಕಾಗಿರುತ್ತದೆ.

ನಮ್ಮ ಮೈಸೂರು ದೇಶದಲ್ಲಿ 1937–38ನೆಯ ಸಾಲಿನಲ್ಲಿ 142 ಹಳ್ಳಿಗಳಲ್ಲಿಯೂ, 31 ಪಟ್ಟಣ ಸಿಟಿಗಳಲ್ಲಿಯೂ ವಿದ್ಯುಚ್ಛಕ್ತಿಯನ್ನು ದೀಪ ಮೊದಲಾದುವುಗಳಿಗೆ ಉಪಯೋಗಿಸುತ್ತಿದ್ದರೆಂದು ತಿಳಿದುಬಂದಿದೆ.

ಸಾಧಾರಣವಾಗಿ ಮನೆಗಳಲ್ಲಿ ವಿದ್ಯುಚ್ಛಕ್ತಿಯ 'ಷಾಕ್' ಜನರ ಅನುಭವಕ್ಕೆ ಬಂದಿರುತ್ತದೆ.

ಇದರ ವಿಷಯದಲ್ಲಿ ಕೆಳಗೆ ತಿಳಿಸಿರುವ ಕೆಲವು ಎಚ್ಚರಿಕೆಗಳನ್ನು ತೆಗೆದುಕೊಳ್ಳಬೇಕು :—

1. ವಿದ್ಯುಚ್ಛಕ್ತಿಗೆ ಶೀತವು ಸಂಪರ್ಕವಾಗದಂತೆ ನೋಡಿಕೊಳ್ಳಬೇಕು. ಒದ್ದೆ ಕೈಯಿಂದ ಸ್ವಿಚ್ಚನ್ನಾಗಲೀ, ಸಾಮಾನುಗಳನ್ನಾಗಲೀ ಮುಟ್ಟಬಾರದು. ಸ್ನಾನದ ಮನೆಯಲ್ಲಿ 'ಇನ್‌ಸುಲೇಟೆಡ್' ಸ್ವಿಚ್ಚುಗಳನ್ನು ಮಾತ್ರ ಉಪಯೋಗಿಸಬೇಕು.

2. ಬಗ್ಗುತಕ್ಕ ಕಾರ್ಡನ್ನು ಜಾಗರೂಕತೆಯಿಂದ ಉಪಯೋಗಿಸಬೇಕು. ಶೀತವಾದ ಪ್ರದೇಶಗಳಲ್ಲಿ ಮಾತ್ರ ಉಪಯೋಗಿಸಲು ಸಿದ್ಧಪಡಿಸಲ್ಪಟ್ಟ ಕಾರ್ಡನ್ನು ಮಾತ್ರ ಉಪಯೋಗಿಸಬೇಕು. ಒದ್ದೆ ಬಟ್ಟೆಯಿಂದ ಕಾರ್ಡನ್ನು ಶುಭ್ರಮಾಡಲು ಯತ್ನಿಸಬಾರದು.

3. ಕಾಯಂ ಆಗಿ ಇರಬೇಕಾದ ಮತ್ತು ಸಮರ್ಪಕವಾಗಿ ಸಿದ್ಧಪಡಿಸಬೇಕಾದ ವೈರಿಂಗಿಗೆ ಬದಲಾಗಿ ಉದ್ದವಾದ ಮತ್ತು ಬಗ್ಗುತಕ್ಕ ಕಾರ್ಡುಗಳನ್ನು ಎಂದಿಗೂ ಉಪಯೋಗಿಸಬಾರದು. ಉದ್ದವಾದ

---

1 (a) ಅಡಿಗೆ ಮತ್ತು ಕಾಯಿಸುವುದಕ್ಕೆ . . 1,562 ಇನ್‌ಸ್ಟಲೇಷನ್‌ಗಳು
(b) ವ್ಯವಸಾಯ ಮತ್ತು ಕೈಗಾರಿಕೆ . . 2,838 ,,
(c) ದೀಪಗಳಿಗೋಸ್ಕರ . . 34,671 ,,

ಕಾರ್ಡುಗಳು ಜಮಖಾನೆ ಮೊದಲಾದುವುಗಳ ಬುಡದಲ್ಲಿ ಇರುವಲ್ಲಿ ಜಾಗ್ರತೆ ಸವೆದುಹೋಗುತ್ತವೆ. ಬಾಗಿಲುಗಳ ಮೂಲಕ ಹೋಗುವಂತೆ ಮಾಡಿದಲ್ಲಿ ನುಜ್ಜುಗುಜ್ಜಾಗಿ ರಕ್ಷಾಕವಚವು ಕೆಟ್ಟುಹೋಗುತ್ತದೆ.

4. ಉಪಯೋಗಮಾಡದೆ ಇರುವಾಗ ಉಷ್ಣಮಾಡುವ ಸಾಮಗ್ರಿಗಳನ್ನು ವಿದ್ಯುಚ್ಛಕ್ತಿಗೆ ಸಂಬಂಧಿಸಿ ಹಾಗೆಯೇ ಬಿಡಬಾರದು; ಕಾರಣವೇನೆಂದರೆ ಬೆಂಕಿಯು ಉತ್ಪನ್ನವಾಗಬಹುದು.

5. ಶುದ್ಧಮಾಡುವಾಗ ಸ್ವಿಚ್ಚನ್ನು 'ಆಫ್' ಮಾಡಬೇಕು.

6. 'ಪ್ಲಗ್' ಕಾರ್ಡ್ ಅಥವಾ ಇತರ ಸಾಮಗ್ರಿಗಳನ್ನು ಚಿಕ್ಕ ಮಕ್ಕಳು ಮುಟ್ಟಿ ಕೆಡಿಸದಂತೆ ನೋಡಿಕೊಳ್ಳಬೇಕು.

7. ದೋಷಯುಕ್ತವಾದ ಸಾಮಾನುಗಳನ್ನು ಎಂದಿಗೂ ಉಪಯೋಗಿಸಬಾರದು. ಸೂಕ್ಷ್ಮವಾದ ದೋಷವು ಇದ್ದರೂ ಅದನ್ನು ತಕ್ಷಣವೇ ಸರಿಪಡಿಸಬೇಕು. ಸರ್ಕಾರದವರಿಂದ ಅಂಗೀಕರಿಸಲ್ಪಟ್ಟ ವಿದ್ಯುಚ್ಛಕ್ತಿ ಕಂಟ್ರಾಕ್ಟರಿಂದ ಮಾತ್ರ ರಿಪೇರಿಮಾಡಿಸಬೇಕು.

8. ಬೇಸಿಗೆಯ ಕಾಲದಲ್ಲಿ ವಿದ್ಯುಚ್ಛಕ್ತಿಯ ಇನ್‌ಸ್ಟಲೇಷನ್ ಸಮರ್ಪಕವಾಗಿದ್ದರೂ, ಮಳೆಗಾಲ ಪ್ರಾರಂಭವಾದ ಕೂಡಲೇ ವಿದ್ಯುಚ್ಛಕ್ತಿಯ ಪ್ರವಾಹವು ಸೋರಿ ಷಾಕ್ ಮೊದಲಾದ ತೊಂದರೆಗಳಿಗೆ ಅವಕಾಶವಾಗಬಹುದು. ವರ್ಷಕ್ಕೊಮ್ಮೆಯಾದರೂ ಮಳೆಗಾಲವು ಪ್ರಾರಂಭವಾಗುವುದಕ್ಕೆ ಮುಂಚೆ ಕಂಟ್ರಾಕ್ಟರಿಂದ ಅದನ್ನು ಪರೀಕ್ಷಿಸಿ ಸಮರ್ಪಕವಾದ ಸ್ಥಿತಿಯಲ್ಲಿದೆಯೇ ಇಲ್ಲವೇ ಎಂಬುದನ್ನು ಕಂಡುಹಿಡಿಯಬೇಕು.

ಈಚೆಗೆ ಹಳ್ಳಿಗಳಲ್ಲಿ ವಿದ್ಯುಚ್ಛಕ್ತಿಯನ್ನು ಹೆಚ್ಚಾಗಿ ಉಪಯೋಗಿಸುತ್ತಿರುವರು. ಇದರ ವಿಷಯವು ಹಳ್ಳಿಯಲ್ಲಿರತಕ್ಕವರಿಗೆ ಪೂರ್ತಿಯಾಗಿ ತಿಳಿಯದಿರುವುದರಿಂದ ಅನೇಕವೇಳೆ ಅಪಾಯಗಳಿಗೆ ಈಡಾಗುವರು.[1]

---

[1] 1936–37 ನೆಯ ಸಾಲಿನಲ್ಲಿ 9 ಮರಣಗಳು ಸಂಭವಿಸಿದುವೆಂದು ತಿಳಿದುಬಂದಿದೆ.
1937–38 ,, 10 ,, ,,
1936–37 ,, 9 ಜನರಿಗೆ ) ಸಾಧಾರಣ ಅಪಾಯಗಳು
1937–38 ,, 10 ಜನರಿಗೆ ) ಸಂಭವಿಸಿದುವೆಂದು ತಿಳಿದುಬಂದಿದೆ.

ಆದುದರಿಂದ ನಮ್ಮ ಸರ್ಕಾರದವರು ಜನಗಳ ಉಪಯೋಗಕ್ಕಾಗಿ ಕೆಲವು ಸಂಗತಿಗಳನ್ನು ಪ್ರಕಟಿಸಿರುವರು.[1] ಇವುಗಳು ಯಾವುವೆಂದರೆ:—

1. ವಿದ್ಯುಚ್ಛಕ್ತಿಯ ತಂತಿಗಳಿರುವ ಕಂಬಗಳನ್ನು ಮುಟ್ಟಕೂಡದು ಮತ್ತು ಒರಗಿಕೊಳ್ಳಕೂಡದು.

2. ದನಕರುಗಳನ್ನೂ ಕುರಿ ಮೇಕೆಗಳನ್ನೂ ಅಥವಾ ಇತರ ಯಾವ ಜಾನುವಾರುಗಳನ್ನೇ ಆಗಲಿ ವಿದ್ಯುಚ್ಛಕ್ತಿಯ ಕಂಬಗಳಿಗೆ ಕಟ್ಟಕೂಡದು. ಹಾಗೆ ಕಟ್ಟುವುದರಿಂದ ಆ ಪ್ರಾಣಿಗಳಿಗಲ್ಲದೆ ಅವುಗಳನ್ನು ಕಾಯುವ ಜನರಿಗೂ ಪ್ರಾಣಾಪಾಯ ಸಂಭವಿಸಬಹುದು.

3. ವಿದ್ಯುಚ್ಛಕ್ತಿಯ ತಂತಿಗಳ ಕೆಳಗೆ ನಡೆಯಕೂಡದು. ಅವುಗಳ ಕೆಳಗಡೆ ಹೋಗಬೇಕಾದ ಸಂದರ್ಭ ಒದಗಿದಾಗ ಸಾಧ್ಯವಾದಷ್ಟು ಬೇಗನೆ ಆ ಸ್ಥಳವನ್ನು ದಾಟಿ ಮುಂದಕ್ಕೆ ಹೋಗಬೇಕು.

4. ನೆಲದಮೇಲೆ ಬಿದ್ದಿರಬಹುದಾದ ವಿದ್ಯುಚ್ಛಕ್ತಿಯ ತಂತಿಗಳನ್ನು ಎಂದಿಗೂ ಮುಟ್ಟಕೂಡದು. ಏಕೆಂದರೆ, ಅವುಗಳಲ್ಲಿ ಕೆಲವುವೇಳೆ ವಿದ್ಯುಚ್ಛಕ್ತಿಯು ಇದ್ದರೂ ಇದ್ದೀತು. ತಂತಿಗಳು ಹಾಗೆ ನೆಲದಮೇಲೆ ಬಿದ್ದಿರುವ ಸಂದರ್ಭಗಳಲ್ಲಿ, ತಂತಿಗಳು ನೆಲದಮೇಲೆ ಬಿದ್ದಿರುವ ಸಮಾಚಾರವನ್ನು ವಿದ್ಯುಚ್ಛಕ್ತಿ ಸರಬರಾಯಿ ಸ್ಟೇಷನ್ನಿಗೆ ಅಥವಾ ಪೋಲೀಸ್ ಸ್ಟೇಷನ್ನಿಗೆ ಆದಷ್ಟು ಜಾಗ್ರತೆ ತಿಳಿಸಬೇಕು.

5. ವಿದ್ಯುಚ್ಛಕ್ತಿಯಿಂದ ಅಪಾಯಕ್ಕೆ ಈಡಾಗಿರುವ ಮನುಷ್ಯರನ್ನಾಗಲೀ ಅಥವಾ ಪ್ರಾಣಿಗಳನ್ನಾಗಲೀ ಕಾಪಾಡುವ ಉದ್ದೇಶದಿಂದ ಮುಂದೆ ನುಗ್ಗಿ ಯಾರೂ ತಮ್ಮ ಕೈಗಳಿಂದ ಮುಟ್ಟಕೂಡದು. ಹಾಗೆ ಮಾಡುವುದು ಪ್ರಾಣಕ್ಕೆ ಅಪಾಯಕರ. ಆ ರೀತಿ ವಿದ್ಯುಚ್ಛಕ್ತಿಯ ತಂತಿಗಳನ್ನು ಅಥವಾ ಕಂಬಗಳನ್ನು ಮುಟ್ಟದುದರಿಂದ ಬಾಧೆಪಡುತ್ತಿರುವ ಜೀವಿಗಳನ್ನು ರಕ್ಷಿಸುವುದಕ್ಕಾಗಿ ತೇವವಿಲ್ಲದ ನೆಲದಮೇಲೆ ಅಥವಾ ತೇವವಿಲ್ಲದ ಹಲಗೆಯಮೇಲೆ ನಿಂತುಕೊಂಡು, ಒಣಗಿದ ಕೋಲಿನ ಮೂಲಕ ಆ ಪ್ರಾಣಿಗಳನ್ನು ವಿದ್ಯುಚ್ಛಕ್ತಿಯ ತಂತಿ ಅಥವಾ ಕಂಬಗಳಿಂದ ಎಳೆಯಬೇಕು. ಕಬ್ಬಿಣ, ಹಿತ್ತಾಳೆ ಮುಂತಾದ ಲೋಹ ಸಂಬಂಧವಾದ

---

[1] Press note, Nos. 288–346, P. O. Dated 31st August 1936.

ಯಾವ ಸಲಕರಣೆಗಳನ್ನು ಆ ಬಗೆಯ ಸಂದರ್ಭಗಳಲ್ಲಿ ಉಪಯೋಗಿಸಕೂಡದು. ಲೋಹದ ಸಲಕರಣೆಯನ್ನು ಉಪಯೋಗಿಸಿದರೆ ಅದರ ಮೂಲಕ ವಿದ್ಯುಚ್ಛಕ್ತಿಯು ಹರಿದು ಅಪಾಯ ಉಂಟಾಗುವುದು.

6. ವಿದ್ಯುಚ್ಛಕ್ತಿಯ ತಂತಿಗಳ ಕೆಳಗೆ ಬೆಂಕಿ ಉರಿಯುತ್ತಿರುವುದು ಕಂಡುಬಂದಾಗ ಸುತ್ತುಮುತ್ತಲು ವಿದ್ಯುಚ್ಛಕ್ತಿಯ ತಂತಿಗಳು ಬಿದ್ದಿಲ್ಲವೆಂಬುದನ್ನು ನಿಷ್ಕರ್ಷೆಯಾಗಿ ತಿಳಿಯದೆ ಆ ಬೆಂಕಿಯನ್ನು ಆರಿಸಲು ಆತುರಪಟ್ಟು ನುಗ್ಗಬಾರದು.

7. ವಿದ್ಯುಚ್ಛಕ್ತಿಯ ತಂತಿಗಳ ಕೆಳಗಡೆ ಆ ತಂತಿಗಳ ಹತ್ತು ಅಡಿಗಳಿಗಿಂತ ಸಮೀಪದಲ್ಲಿರುವಂತೆ ಪೈರುಗಳು ಬೆಳೆಯಲು ಅವಕಾಶ ಕೊಡಕೂಡದು.

8. ವಿದ್ಯುಚ್ಛಕ್ತಿಯ ತಂತಿಗಳ ಸಮೀಪದಲ್ಲಿರುವ ಮರಗಳನ್ನು ಹತ್ತಕೂಡದು.

9. ವಿದ್ಯುಚ್ಛಕ್ತಿಯ ತಂತಿಗಳಮೇಲೆ ಚಾಚಿಕೊಂಡಿರುವ ಮರದ ಕೊಂಬೆಗಳನ್ನು ಕತ್ತರಿಸಲು ಪ್ರಯತ್ನಿಸಕೂಡದು.

10. ವಿದ್ಯುಚ್ಛಕ್ತಿಯ ತಂತಿಗಳ ಕೆಳಭಾಗದಲ್ಲಿ ತಿರುಗಾಡುವ ಗಾಡಿಗಳ ಕಮಾನಿನಮೇಲಾಗಲೀ ಅಥವಾ ಭರ್ತಿಮಾಡಿರುವ ಸಾಮಾನುಗಳಮೇಲಾಗಲೀ ಕುಳಿತುಕೊಂಡು ಹೋಗಕೂಡದು.

11. ವಿದ್ಯುಚ್ಛಕ್ತಿಯ ತಂತಿಗಳಿಗೆ ದಾರ, ಹುರಿ, ಹಂಬು—ಮುಂತಾದುವುಗಳನ್ನು ಎಸೆಯಲು ಅಥವಾ ತಂತಿಗಳು ಇರುವ ಅಕ್ಕಪಕ್ಕ ಪ್ರದೇಶಗಳಲ್ಲಿ ಪಟಗಳನ್ನು ಆಡಿಸಲು ಹುಡುಗರಿಗೆ ಅವಕಾಶ ಕೊಡಕೂಡದು.

## (b) ರೇಡಿಯೋ ಮತ್ತು ಟೆಲಿಫೋನ್

ರೇಡಿಯೋ ಮತ್ತು ಟೆಲಿಫೋನ್ ಇನ್‌ಸ್ಟಲೇಷನ್‌ಗಳ[1] ವಿಚಾರದಲ್ಲಿ ಸಂಪೂರ್ಣವಾಗಿ ತಿಳಿದುಕೊಂಡಿರಬೇಕು.

---

1 1937–38ನೆಯ ಸಾಲಿನಲ್ಲಿ 417 ಬ್ರಾಡ್‌ಕ್ಯಾಸ್ಟ್ ರಿಸೀವರ್ ಸೆಟ್ಟುಗಳು ಮತ್ತು 5 ಟ್ರಾನ್ಸ್‌ಮಿಟ್ಟಿಂಗ್ ಸೆಟ್ಟುಗಳು ಇದ್ದುವೆಂದು ತಿಳಿದುಬಂದಿದೆ.

ಬೆಂಗಳೂರು ಸಿಟಿಯಲ್ಲಿ 500 ಟೆಲಿಫೋನ್‌ಗಳಿವೆ ಎಂದು ತಿಳಿದುಬಂದಿದೆ.
ಮೈಸೂರು ,, 300 ,,
ಸಿ. ಅಂಡ್ ಎಂ. ಸ್ಟೇಷನ್ 200 ,,

## X. ದುಷ್ಟ ಪ್ರಾಣಿಗಳು ಮತ್ತು ಮನೆ

1. ದುಷ್ಟ ಪ್ರಾಣಿಗಳ ಹತ್ತಿರ ಮಕ್ಕಳು ಹೋಗದಂತೆ ನೋಡಿಕೊಳ್ಳಬೇಕು. ಸಾಧುಪ್ರಾಣಿಗಳನ್ನು ರೇಗಿಸುವುದರಿಂದ ಅನೇಕವೇಳೆ ಅಪಾಯಗಳಾಗಬಹುದು. ಆದುದರಿಂದ ಪ್ರಾಣಿಗಳ ವಿಷಯದಲ್ಲಿ ಬಹಳ ಹುಷಾರಾಗಿರಬೇಕು.

2. ಮನೆಯನ್ನು ಚೊಕ್ಕಟವಾಗಿಟ್ಟುಕೊಳ್ಳಬೇಕು. ಮತ್ತು ಆರೋಗ್ಯಶಾಸ್ತ್ರ ನಿಯಮಗಳನ್ನು ನೆನಪಿನಲ್ಲಿಟ್ಟುಕೊಂಡು ಅವನ್ನು ಆಚರಣೆಗೆ ತರಬೇಕು.

3. ಮನೆಯಲ್ಲಿ ಔಷಧಿ ಸೀಸೆಗಳನ್ನು ಮನಸ್ಸು ಬಂದಹಾಗೆ ಇಡಕೂಡದು. ಇದರಿಂದ ಅನೇಕ ಅಪಾಯಗಳು ಸಂಭವಿಸಬಹುದು. ಉದಾಹರಣೆಗಾಗಿ, ಕಣ್ಣುನೋವಿನಿಂದ ನರಳುತ್ತಿದ್ದ ಚಿಕ್ಕಮಗುವಿನ ಕಣ್ಣಿಗೆ ಒಬ್ಬ ತಾಯಿಯು ತಿಳಿಯದೆ 'ಟಿಂಚರ್ ಅಯೊಡಿನ್' ಎಂಬುದನ್ನು, ಔಷಧಿ ಎಂದು ತಿಳಿದು ಹಾಕಿ ಕಣ್ಣನ್ನು ಕಳೆದಳೆಂದೂ, ಆ ಮಗುವು ಸಾಯುವವರೆಗೂ ದುಃಖಪಟ್ಟಿತೆಂದೂ ತಿಳಿದುಬಂದಿದೆ. ಆದುದರಿಂದ ಔಷಧಿ ಸೀಸೆ ಮೊದಲಾದುವುಗಳನ್ನು ಪ್ರತ್ಯೇಕವಾದ ಸ್ಥಳದಲ್ಲಿಡುವುದಲ್ಲದೆ ಉಪಯೋಗಿಸುವಾಗ ಬಹಳ ಜಾಗರೂಕರಾಗಿರಬೇಕು.

4. ಪದಾರ್ಥಗಳನ್ನು ಕಾಯಿಸುತ್ತಿರುವಾಗ ಮತ್ತು ಇತರ ಸಂದರ್ಭಗಳಲ್ಲಿ ಕೆಲವುವೇಳೆ 'ಬಡ್' ಎಂಬ ಶಬ್ದದೊಂದಿಗೆ ಸಿಡಿಯುತ್ತವೆ. ಆಗ ಬಹಳ ಹುಷಾರಾಗಿರಬೇಕು.

5. ದೀಪಾವಳಿ ಮೊದಲಾದ ಹಬ್ಬಗಳಲ್ಲಿ ಬಾಲಕರು ಬಾಣ-ಬಿರುಸು, ಬೆಳ್ಳುಳ್ಳಿ, ಪಟಾಸು ಮೊದಲಾದುವುಗಳನ್ನುಪಯೋಗಿಸುತ್ತಾರೆ. ಅನೇಕ ಬಾಲಕರು ಅಜಾಗರೂಕತೆಯಿಂದ ಇವುಗಳನ್ನುಪಯೋಗಿಸಿ ಅನೇಕ ಅಪಾಯಗಳಿಗೆ ಈಡಾಗಿರುವುದಲ್ಲದೆ ಪ್ರಾಣವನ್ನೂ ಸಹ ಕಳೆದುಕೊಂಡಿರುತ್ತಾರೆ. ಆದುದರಿಂದ ಬಹಳ ಜಾಗರೂಕತೆಯಿಂದ ಇವುಗಳನ್ನುಪಯೋಗಿಸಬೇಕೆಂದು ತಿಳಿಸುವುದಲ್ಲದೆ, ಅವರು ಉಪಯೋಗಿಸುತ್ತಿರುವಾಗ ಮೇಲ್ವಿಚಾರಣೆ ಮಾಡುತ್ತಿರಬೇಕು.

## ಪ್ರಶ್ನೆಗಳು

1. ಮೇಣದ ಬತ್ತಿಯನ್ನು ಉಪಯೋಗಿಸುವಾಗ ಗಮನದಲ್ಲಿಡಬೇಕಾದ ಅಂಶಗಳಾವುವು?
2. ಲ್ಯಾಂಪು ಅಥವಾ ಲಾಂದ್ರ ಇವುಗಳನ್ನುಪಯೋಗಿಸುವಾಗ ಕೆಲವು ಎಚ್ಚರಿಕೆಗಳನ್ನು ತೆಗೆದುಕೊಳ್ಳಬೇಕು. ಇವು ಯಾವುವು?
3. ಸ್ಟೋವು ಮತ್ತು ಲ್ಯಾಂಪು ಇವುಗಳಿಂದ ಯಾವ ಅಪಾಯವೂ ಆಗದ ರೀತಿಯಲ್ಲಿ ಉಪಯೋಗಿಸುವುದು ಹೇಗೆಂಬುದನ್ನು ಕುರಿತು ನಿಮ್ಮ ಸ್ನೇಹಿತನಿಗೆ ಒಂದು ಕಾಗದವನ್ನು ಬರೆಯಿರಿ.
4. ಕೆಳಗಿನ ಪ್ರಶ್ನೆಗಳಿಗೆ ಒಂದು ಅಥವಾ ಎರಡು ವಾಕ್ಯಗಳಲ್ಲಿ ಉತ್ತರವನ್ನು ಬರೆಯಿರಿ:—
   (i) ಉರಿಯುತ್ತಿರುವ ಬೆಂಕಿಯಮೇಲೆ ಸೀಮೆ ಎಣ್ಣೆಯನ್ನು ಸುರಿಯಬಾರದು. ಏಕೆ?
   (ii) ಬಟ್ಟೆಗಳು ಇರತಕ್ಕ ಸ್ಥಳದಲ್ಲಿ ಉರಿಯುತ್ತಿರುವ ಮೇಣದ ಬತ್ತಿಯನ್ನು ತೆಗೆದುಕೊಂಡು ಹೋಗಬಾರದು. ಕಾರಣವೇನು?
   (iii) ದೀಪಗಳನ್ನು ಆರಿಸದೆ ಮನೆಯನ್ನು ಬಿಡಬಾರದು. ಕಾರಣವೇನು?
   (iv) ಸೀಮೆ ಎಣ್ಣೆಯನ್ನುಪಯೋಗಿಸಿ ಬರ್ನರನ್ನು ಕಾಯಿಸಬಾರದು. ಕಾರಣವೇನು?
   (v) ಸಾಮಾನಿಡುವ ಹಲಗೆಯ ಕೆಳಗೆ ಸ್ಟೋವನ್ನು ಇಡಬಾರದು? ಕಾರಣವೇನು?
   (vi) ಅಡಿಗೆಮಾಡುವಾಗ ಸಡಿಲವಾದ ಮತ್ತು ತೆಳುವಾದ ಬಟ್ಟೆಗಳನ್ನು ಧರಿಸಬಾರದು. ಕಾರಣವೇನು?
5. ಬೆಂಕಿಯ ರಕ್ಷಕಗಳನ್ನುಪಯೋಗಿಸುವುದರಿಂದ ಪ್ರಯೋಜನವೇನು?
6. ಅಡಿಗೆಪಾತ್ರೆಗಳನ್ನು ಇಳಿಸುವಾಗ ಧರಿಸಿದ ಸೀರೆ, ಪಂಚೆ ಮೊದಲಾದುವುಗಳನ್ನು ಎಂದಿಗೂ ಉಪಯೋಗಿಸಬಾರದು. ಕಾರಣವೇನು?
7. ಕಾರ್ಬನ್ ಮಾನಾಕ್ಸೈಡ್ ಎಂಬ ಅನಿಲವು ಎಂತಹ ಸಂದರ್ಭಗಳಲ್ಲಿ ಉತ್ಪನ್ನವಾಗುತ್ತದೆ?
8. ಈ ಅನಿಲವನ್ನು ಸೇವಿಸುವುದರಿಂದ ತೋರಿಬರುವ ಚಿಹ್ನೆಗಳಾವುವು?
9. ಧರಿಸಿರುವ ಬಟ್ಟೆಗಳಿಗೆ ಬೆಂಕಿಯು ತಗಲಿದಾಗ ಮತ್ತು ಸುಟ್ಟ ಘಾಯಗಳಾದಾಗ ಯಾವ ನಿವಾರಣೋಪಾಯಗಳನ್ನು ಕೈಕೊಳ್ಳಬೇಕು?
10. ವಿದ್ಯುಚ್ಛಕ್ತಿಯನ್ನು ದೀಪಕ್ಕೂ, ಅಡಿಗೆ ಮೊದಲಾದುವುಗಳಿಗೂ ಉಪಯೋಗಿಸುವಾಗ ಕೆಲವು ಎಚ್ಚರಿಕೆಗಳನ್ನು ತೆಗೆದುಕೊಳ್ಳಬೇಕು. ಇವು ಯಾವುವು?
11. ಪ್ರತಿಯೊಬ್ಬನೂ ಮುಖ್ಯವಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕಾಗಿರುವ ಆರೋಗ್ಯಶಾಸ್ತ್ರದ ನಿಯಮಗಳಾವುವು?
12. ದುಷ್ಟಪ್ರಾಣಿಗಳ ಹತ್ತಿರ ಮಕ್ಕಳು ಹೋಗಕೂಡದು. ಕಾರಣವೇನು?

# ಆರನೆಯ ಅಧ್ಯಾಯ

## 1. ನೀರು ಮತ್ತು ರಕ್ಷಣೆ

ಸಾಧಾರಣವಾಗಿ ಎಲ್ಲರಿಗೂ ಈಜು ಬರುವುದಿಲ್ಲ. ನೀರಿನ ಆಳವನ್ನು ತಿಳಿಯದೆ, ಕೆರೆ-ಕೊಳ-ನದಿ— ಇವುಗಳಿಗೆ ಸ್ನಾನ ಮೊದಲಾದುವುಗಳನ್ನು ಮಾಡುವುದಕ್ಕೆ ಹೋಗಿ ಜಾರಿ ಅನೇಕರು ಪ್ರಾಣವನ್ನು ಕಳೆದು ಕೊಂಡಿರುತ್ತಾರೆ. ಕೆಲವುವೇಳೆ ನೀರಿನಲ್ಲಿ ಮುಳುಗುತ್ತಿರುವವರನ್ನು ಎಳೆದುಕೊಳ್ಳಲಿಕ್ಕೆ ಹೋಗಿ ಕೆಲವರು ಪ್ರಾಣವನ್ನು ಕಳೆದುಕೊಂಡಿರುತ್ತಾರೆ. ಆದುದರಿಂದ ಈಜು ಬಾರದಿರುವವರು ಬಹಳ ಹುಷಾರಾಗಿರಬೇಕು.

ದೋಣಿಗಳಲ್ಲಿ ದಾಟುವಾಗ, ವಿಹಾರಕ್ಕಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವಾಗ ಬಹಳ ಜಾಗರೂಕರಾಗಿರಬೇಕು.

ನದಿಗಳ ದಡಗಳಲ್ಲಿ ವಾಸಮಾಡುವವರು ಈಜುವುದನ್ನು ಕಲಿತಿರ ಬೇಕು ಮತ್ತು ಪ್ರವಾಹಕಾಲದಲ್ಲಿ ಹುಷಾರಾಗಿರಬೇಕು. ಕೆಲವುವೇಳೆ ಪ್ರವಾಹವು ಹೆಚ್ಚಿ, ಅನೇಕ ತೊಂದರೆಗಳಾಗುತ್ತವೆ. 1924ನೆಯ ಇಸವಿಯಲ್ಲಿ ತುಂಗಭದ್ರಾ ಪ್ರವಾಹದಿಂದ 485 ಮನೆಗಳಿಗೆ ಅಪಾಯ ವಾಯಿತೆಂದೂ, 250 ಮನೆಗಳು ಬಿದ್ದುಹೋದವೆಂದೂ ತಿಳಿದುಬಂದಿದೆ.

ಈಜುವುದನ್ನು ಸಾಧ್ಯವಾದಮಟ್ಟಿಗೆ ಪ್ರತಿಯೊಬ್ಬನೂ ಕಲಿಯಲು ಯತ್ನಿಸಬೇಕು. ಹೀಗೆ ಮಾಡುವುದರಿಂದ ಸಮಯಬಂದಾಗ ತನ್ನ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕೆ ಸಾಧ್ಯವಾಗುವುದಲ್ಲದೆ, ಇತರರ ಪ್ರಾಣವನ್ನೂ ಸಹ ಉಳಿಸಬಹುದು.

ಪ್ರತಿ ದೇಶದಲ್ಲಿ ಈಜುವುದನ್ನು ಕಲಿಸುವುದಕ್ಕೆ ಸಾರ್ವಜನಿಕ ಸಂಸ್ಥೆಗಳನ್ನು ಏರ್ಪಡಿಸುತ್ತಿರುವರು. ನಮ್ಮ ದೇಶದಲ್ಲಿಯೂ ಸಹ ಇಂತಹ ಸಂಸ್ಥೆಗಳು ಏರ್ಪಡಿಸಲ್ಪಟ್ಟಿರುತ್ತವೆ.

## 2. ಗಾಳಿ ಮತ್ತು ರಕ್ಷಣೆ

ಈಚೆಗೆ ವಿಮಾನಗಳು ಹೆಚ್ಚುತ್ತಿರುವುವು. ಸಾಮಾನುಗಳನ್ನೂ ಜನಗಳನ್ನೂ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಸಾಗಿಸುತ್ತಿರುವರು.

ಟಪಾಲ್ ಮೊದಲಾದುವುಗಳನ್ನು ತೆಗೆದುಕೊಂಡುಹೋಗುವುದಕ್ಕೆ ಪ್ರತ್ಯೇಕವಾದ ವಿಮಾನಗಳನ್ನು ಏರ್ಪಡಿಸಿರುತ್ತಾರೆ. ವಿಮಾನಗಳನ್ನು ನಡೆಯಿಸುವವರು ಎಷ್ಟೇ ಬುದ್ಧಿವಂತರಾಗಿದ್ದರೂ ಪೂರ್ವಭಾವಿಯಾಗಿ ಸಿದ್ಧಪಡಿಸಿಕೊಂಡು ಸಂಚಾರಪ್ರಾರಂಭಮಾಡಿದರೂ ಕೆಲವು ವೇಳೆ ಅನಿರೀಕ್ಷಿತ ಕಾರಣಗಳಿಂದ ನಿಸ್ಸಹಾಯಕರಾಗಿ ಅನಾಹುತಗಳಿಗೆ ಈಡಾಗುತ್ತಿರುವರು. ವಿಮಾನಗಳಿಂದಾಗುವ ನಷ್ಟವು ವರ್ತಮಾನ ಪತ್ರಿಕೆಗಳ ಮೂಲಕ ನಮ್ಮ ಗಮನಕ್ಕೆ ಆಗಾಗ್ಗೆ ಬರುತ್ತಿರುವುದು. ಅತಿ ಜಾಗ್ರತೆಯಾಗಿ ಈ ವಿಮಾನಗಳಲ್ಲಿ ಸಂಚಾರಮಾಡಬಹುದಾದರೂ ಅಪಾಯಗಳು ಬಹಳವಾಗುತ್ತವೆ. ಇವುಗಳಲ್ಲಿ ಸಂಚಾರಮಾಡತಕ್ಕವರು ಬಹಳ ಜಾಗರೂಕರಾಗಿರಬೇಕು.

## 3. ಕಾರ್ಖಾನೆ ಮತ್ತು ರಕ್ಷಣೆ

ಪ್ರತಿ ದೇಶದಲ್ಲಿಯೂ ಕಾರ್ಖಾನೆಗಳ ಸಂಖ್ಯೆಯು ಹೆಚ್ಚುತ್ತಿರುವುದು. ಸಾವಿರಾರು ಜನರು ಏಕತ್ರ ಸೇರಿ ಪ್ರತಿನಿತ್ಯವೂ ಕೆಲಸ ಮಾಡುತ್ತಿರುವುದರಿಂದಲೂ, ದೊಡ್ಡ ದೊಡ್ಡ ಯಂತ್ರಗಳ ಸಹಾಯದಿಂದ ಕೆಲಸವು ಜರುಗಬೇಕಾಗಿರುವುದರಿಂದಲೂ, ಕೆಲವುವೇಳೆ ಕಾರ್ಖಾನೆಯ ಮಾಲೀಕರು ಲಾಭದ ಕಡೆ ಹೆಚ್ಚು ಗಮನವಿಟ್ಟು ಕೆಲಸಗಾರರ ಕ್ಷೇಮ ಚಿಂತನೆಯನ್ನು ಸಂಪೂರ್ಣವಾಗಿ ಮಾಡಬೇಕಾದ ಸೌಕರ್ಯಗಳನ್ನು ಒದಗಿಸದಿರುವುದರಿಂದಲೂ ಆಗಾಗ್ಗೆ ತೊಂದರೆಗಳು ಸಂಭವಿಸುತ್ತಿರುವುವು. ಮರಣಗಳ ಸಂಖ್ಯೆಯೂ[1] ಸಹ ಹೆಚ್ಚುತ್ತಿರುವುದು. ಹೀಗಿರುವುದರಿಂದ ಕೆಳಗೆ ತಿಳಿಸಿರುವ ಸಂಗತಿಗಳಿಗೆ ಗಮನವನ್ನು ಕೊಡಬೇಕಾಗುತ್ತದೆ:—

1. ಕೈಗಾರಿಕೆಗಳಿಗೆ ಸಂಬಂಧಪಟ್ಟ ಪ್ರಾಣರಕ್ಷಣೆಯ ಪ್ರಕಟನಾ ಪತ್ರಿಕೆಗಳನ್ನು ಜನರಲ್ಲಿ ಮುಖ್ಯವಾಗಿ ಕೆಲಸಗಾರರಲ್ಲಿ ಹರಡಬೇಕು.

2. ಆಯುಧ ಮೊದಲಾದುವುಗಳನ್ನು ಸರಿಯಾಗಿ ಉಪಯೋಗಿಸುವುದಕ್ಕೆ ಸಹಕಾರಿಯಾದ ಶಿಕ್ಷಣವನ್ನು ಕೊಡಬೇಕು.

---

1 1934ನೆಯ ಇಸವಿಯಲ್ಲಿ ಇಂಡಿಯಾ ದೇಶದ ಕಾರ್ಖಾನೆಗಳಲ್ಲಿ 233 ಆಕಸ್ಮಿಕ ಮರಣಗಳು ಸಂಭವಿಸಿದವೆಂದೂ, 4,440 ಜನರಿಗೆ ಬಲವಾದ ಅಪಾಯಗಳೂ, 16,114 ಜನರಿಗೆ ಸಾಧಾರಣ ಘಾಯಗಳು ಆದವೆಂದೂ ತಿಳಿದುಬಂದಿದೆ. ಈ ಸಂಖ್ಯೆಗಳು ಪ್ರತಿ ವರ್ಷವೂ ಹೆಚ್ಚುತ್ತಿರುವುವು.

3. ಆಯುಧ ಮೊದಲಾದುವುಗಳನ್ನು ಇಡುವುದಕ್ಕೆ ಪ್ರತ್ಯೇಕವಾದ ಕೋಣೆಯು ಅವಶ್ಯಕ.

4. ಕಾರ್ಖಾನೆಗಳಲ್ಲಿ ಆಗಾಗ್ಗೆ ಸಂಭವಿಸುವ ಮರಣಗಳ ತಃಖ್ತಿಯನ್ನು ಮಾಡಿ ಕಾರಣಗಳನ್ನು ಕಂಡುಹಿಡಿದು ಕೂಲಿಗಾರರಿಗೆ ತಿಳಿಸಬೇಕು.

5. ಕಾರ್ಖಾನೆಗಳ ನಿಬಂಧನೆಗಳನ್ನು ಪ್ರಕಟಿಸಬೇಕು.

6. ಒಳ್ಳೆಯ ಸಾಮಾನುಗಳನ್ನೂ ಆಯುಧಗಳನ್ನೂ ಕೆಲಸಗಾರರಿಗೆ ಒದಗಿಸಬೇಕು.

7. ಕಾರ್ಖಾನೆಯ ಮಾಲೀಕರು ಪರಸ್ಪರ ಸೇರಿ ಸಹಾನುಭೂತಿಯಿಂದ ಕಾರ್ಯಗಳನ್ನು ನಡೆಯಿಸತಕ್ಕದ್ದು.

8. ಕೆಲಸಗಾರರ ಕ್ಷೇಮಚಿಂತನೆಯನ್ನು ಕಾರ್ಖಾನೆಯ ಮಾಲೀಕರು ಸದಾ ಮಾಡುತ್ತಿದ್ದು ಸೌಕರ್ಯಗಳನ್ನು ಸಾಧ್ಯವಾದ ಮಟ್ಟಿಗೆ ಏರ್ಪಡಿಸುತ್ತಿರಬೇಕು.

9. ಸರ್ಕಾರದವರು ಕಾನೂನುಗಳ ಮೂಲಕ ಕೆಲಸಗಾರರಿಗೆ ಅನಾವಶ್ಯಕವಾದ ತೊಂದರೆಗಳು ಆಗದಂತೆ ನೋಡಿಕೊಳ್ಳಬೇಕು.

## 4. ರೈಲ್ವೆ ಮತ್ತು ರಕ್ಷಣೆ

ಪ್ರಯಾಣ ಸೌಕರ್ಯಗಳಲ್ಲಿ ಇದೊಂದು ಮುಖ್ಯವಾದುದು. ಮೈಸೂರು ದೇಶದಲ್ಲಿ ರೈಲ್ವೆಗಳ ಸಂಖ್ಯೆಯು ಹೆಚ್ಚುತ್ತಿರುವುದು. ರೈಲ್ವೆ ಅನಾಹುತ ಮೊದಲಾದುವುಗಳು ಆಗಾಗ್ಗೆ ಸಂಭವಿಸುತ್ತಿರುವುವು. ಪ್ರಯಾಣಿಕರು ಗಮನಿಸಬೇಕಾದ ಅಂಶಗಳು ಕೆಲವಿರುವುವು. ಪ್ರಯಾಣಿಕರ ಕ್ಷೇಮಚಿಂತನೆಯನ್ನು ಮಾಡಬೇಕಾಗಿರುವುದು ರೈಲ್ವೆ ಇಲಾಖೆಗೆ ಸೇರಿದ್ದಾಗಿರುತ್ತದೆ.

1. ರೈಲ್ವೆ ಗಾಡಿಗಳನ್ನು ಹತ್ತುವಾಗ ಮತ್ತು ಇಳಿಯುವಾಗ ಪ್ರಯಾಣಿಕರು ಬಹಳ ಜಾಗರೂಕರಾಗಿರಬೇಕು. ಗಾಡಿಯು ಚಲಿಸುತ್ತಿರುವಾಗ ಹತ್ತುವುದನ್ನಾಗಲೀ, ಇಳಿಯುವುದನ್ನಾಗಲೀ ಎಂದಿಗೂ ಮಾಡಕೂಡದು. ಈ ರೀತಿ ಮಾಡುವುದಕ್ಕೆ ಹೋಗಿ ಅನೇಕರು ಚಕ್ರಕ್ಕೆ

ಸಿಕ್ಕಿ ಪ್ರಾಣವನ್ನು ಕಳೆದುಕೊಂಡಿರುತ್ತಾರೆ. ಗಾಡಿಯು ನಿಲ್ಲುವವರೆಗೂ ಹತ್ತುವುದನ್ನಾಗಲೀ, ಇಳಿಯುವುದನ್ನಾಗಲೀ ಖಂಡಿತ ಮಾಡಕೂಡದು.

2. ರೈಲ್ವೆ ಗಾಡಿಯನ್ನು ಹತ್ತಿ ಒಳಗೆ ಹೋಗಿ ಸರಿಯಾಗಿ ಕುಳಿತುಕೊಳ್ಳಬೇಕು. ಪ್ರಯಾಣಿಕರಿಗೆ ಯಾವ ವಿಧವಾದ ತೊಂದರೆಯನ್ನೂ ಉಂಟುಮಾಡಬಾರದು.

3. ಕಿಡಕಿಗಳ ಬಳಿಯಲ್ಲಿ ಮಕ್ಕಳು ಕುಳಿತುಕೊಳ್ಳುವುದಕ್ಕೆ ಅವಕಾಶ ಕೊಡಬಾರದು; ಏಕೆಂದರೆ ಹಣಿಕಿಹಾಕುವುದು, ಕೈಗಳನ್ನು ಚಾಚುವುದು ಇವೇ ಮೊದಲಾದುವುಗಳನ್ನು ಮಾಡಿ ಅನೇಕ ಅಪಾಯಗಳಿಗೆ ಈಡಾಗಬಹುದು.

4. ಬೀಡಿ ಮೊದಲಾದುವುಗಳನ್ನು ಸೇದಬೇಕಾದರೆ ಇದಕ್ಕೋಸ್ಕರ ಏರ್ಪಡಿಸಿರುವ ಸ್ಥಳದಲ್ಲಿ ಮಾತ್ರ ಸೇದಬೇಕು.

5. ಬಾಗಿಲುಗಳನ್ನು ಹಾಕುವಾಗ ಮತ್ತು ತೆರೆಯುವಾಗ ಬಹಳ ಹುಷಾರಾಗಿರಬೇಕು.

6. ಗಾಡಿಗಳಲ್ಲಿ ಬಾಳೆಹಣ್ಣಿನ ಸಿಪ್ಪೆ, ಕಾಗದದ ಚೂರು, ಗ್ಲಾಸಿನ ಚೂರು ಮೊದಲಾದುವುಗಳನ್ನು ಬಿಸಾಡಿ ಕೊಳೆಯಾಗುವಂತೆ ಮಾಡಬಾರದು ಮತ್ತು ಗಾಡಿಯು ಸಂಚಾರದಲ್ಲಿರುವಾಗ ಇವುಗಳನ್ನು ಹೊರಗಡೆ ಎಸೆಯಬಾರದು.

7. ಭಾರವಾದ ಗಂಟು ಮೊದಲಾದುವುಗಳನ್ನು ಹೆಚ್ಚಾಗಿ ಸೀಟವ ಹತ್ತಿರ ಇಟ್ಟುಕೊಂಡು ಇತರ ಪ್ರಯಾಣಿಕರಿಗೆ ತೊಂದರೆಯನ್ನುಂಟು ಮಾಡಬಾರದು. ಇವುಗಳಿಗೋಸ್ಕರ ಪ್ರತ್ಯೇಕ ಗಾಡಿಗಳಿರುತ್ತವೆ; ಅಲ್ಲಿ ಇಡಬೇಕು.

8. ರೈಲ್ವೆ ಗಾರ್ಡಿನೊಂದಿಗೆ ಯಾವ ಸಂದರ್ಭಗಳಲ್ಲಿ ಮಾತಾಡಬೇಕೆಂಬುವನ್ನು ತಿಳಿದುಕೊಂಡಿರಬೇಕು.

9. ಗಾಡಿಯಲ್ಲಿರುವ ಸರಪಣಿಯನ್ನು ಯಾವ ಸಂದರ್ಭದಲ್ಲಿ ಎಳೆಯಬೇಕು, ಗಾಡಿಯು ಸಂಚಾರದಲ್ಲಿರುವಾಗ ಎಳೆದರೆ ಯಾವ ಶಿಕ್ಷೆಯಾಗುತ್ತದೆ— ಇವೇ ಮೊದಲಾದುವುಗಳನ್ನು ಚೆನ್ನಾಗಿ ತಿಳಿದುಕೊಂಡಿರಬೇಕು.

10. ಗಾಡಿಯು ನಿಲ್ಲದ ವಿನಾ ಇಳಿಯಬಾರದು. ಇಳಿಯುವಾಗ ಪ್ಲಾಟ್‌ಫಾರಮ್ಮಿನ ಕಡೆಗೆ ದೃಷ್ಟಿ ಇಟ್ಟು, ಪ್ಲಾಟ್‌ಫಾರಮ್ಮಿಗೂ ಇಳಿಯುವ ಮೆಟ್ಟಲಿಗೂ ಇರುವ ಅಂತರವನ್ನು ಗಮನಕ್ಕೆ ತೆಗೆದು ಕೊಂಡು ಇಳಿಯಬೇಕು. ಪ್ಲಾಟ್‌ಫಾರಮ್ಮಿನಲ್ಲಿ ಮಾತ್ರ ಇಳಿಯಬೇಕೇ ವಿನಾ ಇತರ ಸ್ಥಳಗಳಲ್ಲಿ ಇಳಿಯಬಾರದು. ಇಳಿಯುವಾಗ ಜಾಗ್ರತೆ ಇಳಿಯಬೇಕು.

11. ರಾತ್ರಿವೇಳೆ ಪ್ರಯಾಣಮಾಡುವಾಗ ಬಹಳ ಹುಷಾರಾಗಿರ ಬೇಕು. ಕಿಡಕಿ, ಬಾಗಿಲು ಮೊದಲಾದುವುಗಳನ್ನು ಭದ್ರವಾಗಿ ಹಾಕಿ ಕೊಂಡು ಪ್ರಯಾಣಮಾಡಬೇಕು.

12. ರೈಲ್ವೆ ನಿಲ್ದಾಣದಲ್ಲಿ ಅಲೆದಾಡುತ್ತಿರುವಾಗ ಬಹಳ ಹುಷಾರಾಗಿರಬೇಕು.

13. ಎಂಜಿನ್ ಬರುತ್ತಿರುವಾಗ ದೂರದಲ್ಲಿರಬೇಕು.

14. ರೈಲ್ವೆ ಇಲಾಖೆಯವರ ಜವಾಬ್ದಾರಿಗಳು ಹೆಚ್ಚಾಗಿರುತ್ತವೆ. ಎಂಜಿನ್ ನಡೆಯಿಸುವವರ ಅಜಾಗರೂಕತೆ ಮತ್ತು ಅವಿವೇಕದಿಂದ ಘೋರವಾದ ಅನಾಹುತಗಳು ನಡೆದಿರುತ್ತವೆ. ಆದುದರಿಂದ ಶಿಕ್ಷಿತ ರಾದವರನ್ನೂ, ಯೋಗ್ಯರಾದವರನ್ನೂ ಈ ಕೆಲಸಕ್ಕೆ ನೇಮಿಸಬೇಕಾಗಿರು ತ್ತದೆ.

15. ಗಾಡಿಗಳನ್ನು ಚೊಕ್ಕಟವಾಗಿಡುವುದು, ಪ್ರಯಾಣಿಕರಿಗೆ ಬೇಕಾದ ಸೌಕರ್ಯಗಳನ್ನು ಕಲ್ಪಿಸುವುದು, ಕಾನೂನುಗಳನ್ನು ಮಾಡು ವುದು ಇವೇ ಮೊದಲಾದುವುಗಳು ಈ ಇಲಾಖೆಯವರಿಗೆ ಸೇರಿರುತ್ತವೆ.

## 5. ಗಣಿಗಳು ಮತ್ತು ರಕ್ಷಣೆ

ಗಣಿಗಳಲ್ಲಿ ಕೆಲಸಮಾಡತಕ್ಕವರಿಗೆ ಅನೇಕ ಅಪಾಯಗಳು ಸಂಭವಿಸುವುವು. ಮರಣಗಳ ಸಂಖ್ಯೆಯೂ[1] ಸಹ ಹೆಚ್ಚುತ್ತಿರುವುದು. ಮಾಲೀಕರು ಇವುಗಳ ಕಾರಣಗಳನ್ನು ಕಂಡುಹಿಡಿದು ನಿವಾರಣೋ ಪಾಯಗಳನ್ನು ಕಲ್ಪಿಸಬೇಕು. ಕೆಲಸಗಾರರು ಗಮನದಲ್ಲಿಡಬೇಕಾಗಿರುವ

---

1 1937–38ನೆಯ ಸಾಲಿನಲ್ಲಿ 223 ಜನರಿಗೆ ಅಪಾಯಗಳಾದುವೆಂದೂ, 42 ಜನರು ಸತ್ತರೆಂದೂ ತಿಳಿದುಬಂದಿದೆ.

ಮುಖ್ಯ ಅಂಶಗಳನ್ನು ಪ್ರಕಟಿಸಿ ಅವರಿಗೆ ಸರಿಯಾದ ಶಿಕ್ಷಣವನ್ನು ಕೊಡಬೇಕು.

## 6. ಸಿನೆಮಾ ಮತ್ತು ನಾಟಕ ಮಂದಿರಗಳು

ಈಚೆಗೆ ಇವು ಹೆಚ್ಚುತ್ತಿರುವುವು. ಪ್ರತಿದಿನವೂ ಅನೇಕ ಜನರು ಏಕತ್ರ ಸೇರುತ್ತಿರುವರು. ಸಿನೆಮಾ ಮೊದಲಾದ ಮಂದಿರಗಳಲ್ಲಿ ಗಲಾಟೆಗಳು ನಡೆದು ಜನರಿಗೆ ತೊಂದರೆಗಳಾಗುತ್ತಿರುವುದನ್ನು ಕೇಳುತ್ತಿರುವೆವು. ಮಂದಿರಗಳು ಆರೋಗ್ಯಶಾಸ್ತ್ರ ನಿಯಮಗಳಿಗನುಸಾರವಾಗಿ ಕಟ್ಟಲ್ಪಡದಿದ್ದಲ್ಲಿ ಜನರಿಗೆ ತೊಂದರೆಯಾಗುತ್ತದೆ. ಸಿನೆಮಾ ಮೊದಲಾದುವುಗಳಿಗೆ ಹೋಗಕೂಡದೆಂದು ನಿರ್ಬಂಧಿಸುವುದು ಯುಕ್ತವಾದುದಲ್ಲ. ಆದರೆ ತೊಂದರೆಗಳ ನಿವಾರಣೋಪಾಯಗಳನ್ನು ಕಂಡುಹಿಡಿದು ಅವುಗಳನ್ನು ಆಚರಣೆಗೆ ತರಲು ಯತ್ನಮಾಡಬೇಕು. ಸರ್ಕಾರದವರು ಈ ಮಂದಿರಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡು ಜನರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಬೇಕಾಗುತ್ತದೆ.

### ಪ್ರಶ್ನೆಗಳು

1. ಈಜುವುದನ್ನು ಪ್ರತಿಯೊಬ್ಬನೂ ಕಲಿತಿರಬೇಕು. ಕಾರಣವೇನು?
2. ನದಿಗಳ ದಡದಲ್ಲಿ ವಾಸಮಾಡುವ ಜನರು ಪ್ರವಾಹಕಾಲದಲ್ಲಿ ಬಹಳ ಹುಷಾರಾಗಿರಬೇಕು. ಕಾರಣವೇನು?
3. ವಿಮಾನಗಳಲ್ಲಿ ಅತಿಜಾಗ್ರತೆಯಾಗಿ ಹೋಗಬಹುದಾದರೂ ಅಪಾಯಗಳು ಹೆಚ್ಚಾಗಿರುತ್ತವೆ. ಇದನ್ನು ವಿಶದಪಡಿಸಿರಿ?
4. ದೊಡ್ಡ ದೊಡ್ಡ ಕಾರ್ಖಾನೆಗಳಲ್ಲಿ ಆಗಾಗ್ಗೆ ಆಕಸ್ಮಿಕ ಮರಣಗಳು ಸಂಭವಿಸುತ್ತಿರುವುವು. ಕಾರಣಗಳೇನು?
5. ರೈಲ್ವೆ ಪ್ರಯಾಣದ ವಿಷಯದಲ್ಲಿ ನೆನಪಿನಲ್ಲಿಡಬೇಕಾದ ಮುಖ್ಯ ಸಂಗತಿಗಳಾವುವು?
6. ಆರೋಗ್ಯಶಾಸ್ತ್ರ ನಿಯಮಗಳಿಗನುಸಾರವಾಗಿ ಕಟ್ಟಲ್ಪಡದಿರುವ ಸಿನೆಮಾ ಮೊದಲಾದ ಮಂದಿರಗಳ ವಿಷಯಕ್ಕೆ ಪ್ರೇಕ್ಷಕರೂ ಸರ್ಕಾರದವರೂ ಹೆಚ್ಚು ಗಮನಕೊಡಬೇಕು? ಕಾರಣವೇನು?

# ಏಳನೆಯ ಅಧ್ಯಾಯ

## ಶಾಲೆಯ ಪೆಟ್ರೋಲು

ಬಾಲಕರು ಶಾಲೆಯನ್ನು ಬಿಡುವಾಗಲೂ, ಶಾಲೆಗೆ ಬರುವಾಗಲೂ ಅಪಾಯಕರವಾದ ಸ್ಥಳಗಳಲ್ಲಿ ಸುಖವಾಗಿ ದಾಟುವುದಕ್ಕೆ ಸರಿಯಾದ ಸಹಾಯವು ಬೇಕಾಗಿರುತ್ತದೆ. ಈ ಸೌಕರ್ಯವನ್ನು ಒದಗಿಸುವುದು ಹೇಗೆ? ಯಾರು ಒದಗಿಸಬೇಕು? ಈ ಪ್ರಶ್ನೆಗಳನ್ನು ವಿಚಾರಮಾಡ ಬೇಕಾಗಿರುತ್ತದೆ. ಪಟ್ಟಣಗಳಲ್ಲಿ ಈ ಸೌಕರ್ಯವನ್ನು ಒದಗಿಸುವ ಆವಶ್ಯಕತೆಯು ಹೆಚ್ಚಾಗಿರುತ್ತದೆ. ಶಾಲೆಗಳಿಗೆ ಕಾಂಪೌಂಡುಗಳು ಇಲ್ಲದೆ ರಸ್ತೆಯ ಪಕ್ಕದಲ್ಲಿಯೇ ಕಟ್ಟಡಗಳು ಇರುತ್ತವೆ. ಶಾಲೆಗೆ ಬರುವಾಗ ಮತ್ತು ಶಾಲೆಯನ್ನು ಬಿಡುವಾಗ ಚಿಕ್ಕಮಕ್ಕಳಿಗೆ ಸಹಾಯವು ಆವಶ್ಯಕವಾಗಿರುತ್ತದೆ. ಈ ಸೌಕರ್ಯವನ್ನು ಒದಗಿಸದಿರುವಲ್ಲಿ ಚಿಕ್ಕ ಮಕ್ಕಳು ಜಾಗ್ರತೆಯಾಗಿ ಹೋಗುವ ವಾಹನಗಳಿಗೆ ಸಿಕ್ಕಿ ಅನೇಕ ಅಪಾಯುಗಳಿಗೆ ಈಡಾಗಬಹುದು.

1921ನೆಯ ಇಸವಿಯಲ್ಲಿ ಚಿಕಾಗೋ ಎಂಬಲ್ಲಿ "ಸ್ಕೂಲ್ ಪೆಟ್ರೋಲು" ಎಂಬುದನ್ನು ಪ್ರಥಮತಃ[1] ಸ್ಥಾಪಿಸಿದರು. ಇದರಿಂದ ಹೆಚ್ಚು ಪ್ರಯೋಜನವು ಕಂಡುಬಂದುದರಿಂದ ಇತರ ಸ್ಥಳಗಳಲ್ಲಿ ಸ್ಥಾಪಿಸಿದರು. ಸದ್ಯಃ ಅಮೇರಿಕಾ ಸಂಯುಕ್ತ ಸಂಸ್ಥಾನಗಳ 1,೫00 ಪಟ್ಟಣಗಳಲ್ಲಿ ಇಂತಹ ಪೆಟ್ರೋಲುಗಳು ಇವೆಯೆಂದು ತಿಳಿದುಬಂದಿದೆ. 3,00,000 ಬಾಲಕರು ಈ ಪೆಟ್ರೋಲುಗಳ ಸದಸ್ಯರಾಗಿ 50,00,000 ಮಕ್ಕಳ ಪ್ರಾಣರಕ್ಷಣೆಯಲ್ಲಿ ನಿರತರಾಗಿರುತ್ತಾರೆ. ಈ ಪಟ್ಟಣಗಳಲ್ಲಿ ಮರಣ ಸಂಖ್ಯೆಯು ಕಡಮೆಯಾಗುತ್ತಿರುವುದು.

ಇಂಡಿಯಾ ದೇಶದಲ್ಲಿಯೂ ಸಹ 1935ನೆಯ ಡಿಶೆಂಬರಿನಲ್ಲಿ "ಅಂಟೋನಿಯೊಡಸಿಲ್ವಾ ಹೈಸ್ಕೂಲ್, ಡಾದರ್, ಬೊಂಬಾಯಿ" ಎಂಬಲ್ಲಿ ಈ ಪೆಟ್ರೋಲನ್ನು ಸ್ಥಾಪಿಸಿದರು. ಆಗಿನಿಂದ ಇದು

---

[1] "Stop, Look, Listen," by A. S. Trollip and R. V. Parulekar.

ಸಮರ್ಪಕವಾಗಿ ಕೆಲಸಮಾಡುತ್ತಾ ಶಾಲೆಗೆ ಹೋಗಿಬರುವ ಮಕ್ಕಳಿಗೆ ಸಹಾಯವನ್ನು ಮಾಡುತ್ತಿರುವುದು.





THE SAFETY FIRST ASSOCIATION OF INDIA

ಚಿತ್ರ 18

## ಕರ್ತವ್ಯಗಳು

ಇದರ ಮುಖ್ಯ ಕರ್ತವ್ಯವು ಶಾಲೆಯ ಹತ್ತಿರವಿರುವ ಅಪಾಯಕರ ವಾದ ಬೀದಿಗಳಲ್ಲಿ ಬಾಲಕರು ಸುರಕ್ಷಿತವಾಗಿ ದಾಟುವುದಕ್ಕೆ ಸಹಾಯ ಮಾಡುವುದಾಗಿರುತ್ತದೆಯೇ ಹೊರತು ವಾಹನಗಳ ಸಂಚಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದಾಗಿರುವುದಿಲ್ಲ. ಆದರೆ ಪೆಟ್ರೋಲಿನ ಸದಸ್ಯನು ಕೈಯನ್ನು ಎತ್ತಿದಾಗ ಸಂಚಾರವಲ್ಲಿರುವ ವಾಹನಗಳನ್ನು ನಡೆಯಿಸುವವರು ಎಚ್ಚರಿಕೆಯನ್ನು ತೆಗೆದುಕೊಂಡು ನಡೆಯಿಸಬೇಕಾಗಿರುತ್ತವೆ (ಚಿತ್ರ 18). ಗೊತ್ತಾದ ದಾಟುವ ಸ್ಥಳಗಳಲ್ಲಿ ಪಾದಚಾರಿಗಳ ಪ್ರಾಣರಕ್ಷಣೆಯ ಹಕ್ಕುಬಾಧ್ಯತೆಗಳನ್ನು ಕಾಪಾಡುವುದು ವಾಹನ ನಡೆಯಿಸುವವರ ಮುಖ್ಯ ಮರ್ಯಾದೆಯಾಗಿರುತ್ತದೆ.

ಪ್ರತಿ ಪೆಟ್ರೋಲಿಗೂ ಒಬ್ಬ ನಾಯಕ ಮತ್ತು ಕೆಲವು ಸದಸ್ಯರಿರುತ್ತಾರೆ. ಪ್ರತಿಯೊಂದು ದಾಟುವ ಸ್ಥಳದಲ್ಲಿ ಎರಡು ಪೆಟ್ರೋಲುಗಳು ಇರುತ್ತವೆ. ಪ್ರತಿ ಪೆಟ್ರೋಲಿಗೂ ಅದರ ಕರ್ತವ್ಯಗಳ ಶಿಕ್ಷಣವು ಆವಶ್ಯಕವಾಗಿರುತ್ತದೆ. ಬಾಲಕರು ಸುರಕ್ಷಿತವಾಗಿ ದಾಟುವುದಕ್ಕೆ ಬೇಕಾದ ಸಲಹೆಗಳನ್ನು ಕೊಡುವುದೂ, ದಾಟುವುದಕ್ಕೋಸ್ಕರ ಏರ್ಪಡಿಸಿರುವ ಸ್ಥಳಗಳಲ್ಲಿ ಮಾತ್ರ ಬಾಲಕರು ದಾಟುವಂತೆ ನೋಡಿಕೊಳ್ಳುವುದೂ, ಕೊಟ್ಟ ಸಂಕೇತಗಳಿಗನುಸಾರವಾಗಿ ಬಾಲಕರು ಪ್ರವರ್ತಿಸುವಂತೆ ಮಾಡುವುದೂ — ಇವೇ ಮೊದಲಾದುವುಗಳು ಇದಕ್ಕೆ ಸೇರಿರುತ್ತವೆ (ಚಿತ್ರ 19). ಶಾಲೆಯ ಮುಖ್ಯೋಪಾಧ್ಯಾಯರು ಪೆಟ್ರೋಲಿನ ಸದಸ್ಯರನ್ನು ನೇಮಿಸಬೇಕು. ಸಾಧಾರಣವಾಗಿ ಮೇಲಿನ ತರಗತಿಯ ವಯಸ್ಸಾದ ಬಾಲಕರನ್ನು ಆರಿಸಬೇಕು. ಅವರ ಸೇವೆಯು ಮುಖ್ಯವಾಗಿ ಅನಿರ್ಬಂಧವಾದುದೂ, ತಂದೆ ತಾಯಿಗಳಿಂದ ಅಂಗೀಕರಿಸಲ್ಪಟ್ಟುದುದೂ ಆಗಿರಬೇಕು. ಪೆಟ್ರೋಲಿನ ಸದಸ್ಯರು ಪ್ರತ್ಯೇಕವಾದ ಅಧಿಕಾರ ಗುರುತನ್ನು ತಿಳಿಸುವ ಬಟ್ಟೆಯನ್ನು ಧರಿಸಬೇಕು.

## ಠಾಣೆಗಳು

ಅಪಾಯಕರವಾದ ಮೂಲೆಗಳಲ್ಲಿ ಪೆಟ್ರೋಲಿನ ಸದಸ್ಯರು ನಿಂತಿರಬೇಕು. ನಾಯಕನು ಯಾವುದಾದರೊಂದು ಸ್ಥಳದಲ್ಲಿ ಮಾತ್ರ ನಿಲ್ಲದೆ

ಪೆಟ್ರೋಲಿನ ಸದಸ್ಯರು ತಮ್ಮ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವರೇ ಇಲ್ಲವೇ ಎಂಬುವನ್ನು ಕಂಡುಹಿಡಿಯಬೇಕು. ಪೆಟ್ರೋಲಿನ ಸದಸ್ಯರು ಶಾಲೆಯ ಆವರಣದಲ್ಲಿ ಮೊದಲು ಸೇರಬೇಕು. ಅನಂತರ ನಾಯಕನು ಅವರನ್ನು ಪರೀಕ್ಷಿಸಿ ಪ್ರತಿಯೊಬ್ಬನಿಗೂ ಕೆಲಸವನ್ನು ಹಂಚಿದನಂತರ ಅವರವರ ಸ್ಥಳಗಳಿಗೆ ಹೋಗತಕ್ಕದ್ದು.

ಶಾಲೆಯ ಘಂಟೆಯು ಬಾರಿಸುವುದಕ್ಕೆ 10 ಅಥವಾ 15 ನಿಮಿಷಗಳ ಮುಂಚೆ ಸದಸ್ಯರು ಅವರವರ ಸ್ಥಳಗಳಲ್ಲಿ ಹಾಜರಿರಬೇಕು; ಕೊನೆಯ ಘಂಟೆಯು ಬಾರಿಸುವವರೆಗೂ ಅಲ್ಲಿಯೇ ಇರಬೇಕು. ಬಾಲಕರು ಶಾಲೆಯನ್ನು ಬಿಡುವಾಗ ಘಂಟೆಯು ಹೊಡೆಯುವುದಕ್ಕೆ ಕೆಲವು ನಿಮಿಷಗಳ ಮುಂಚೆ ಹಾಜರಿರಬೇಕು.

ನಾಯಕನು ಶಾಲೆಯ ಕಟ್ಟಡದ ನಕ್ಷೆಯನ್ನು ತಯಾರಿಸಿ ಹೆಚ್ಚು ಬಾಲಕರು ಹೋಗಿಬರುವ ದಾರಿಗಳನ್ನು ಕಂಡುಹಿಡಿದು ನಕ್ಷೆಯಲ್ಲಿ ನಮೂದಿಸಬೇಕು. ಸದಸ್ಯರು ಇಂತಹ ಸ್ಥಳಗಳಲ್ಲಿದ್ದು ಬಾಲಕರಿಗೆ ಸಹಾಯಮಾಡಬೇಕು.

## ಬಾಲಕರ ಸಹಕಾರ

ಸದಸ್ಯರ ಉದ್ದೇಶವು ಸಮರ್ಪಕವಾಗಿ ನೆರವೇರಬೇಕಾದರೆ, ಬಾಲಕರ ಸಂಪೂರ್ಣವಾದ ಸಹಕಾರವು ಬೇಕು; ಮತ್ತು ಸದಸ್ಯರಲ್ಲಿ ಅವರಿಗೆ ಗೌರವವು ಇರಬೇಕು. ಪೆಟ್ರೋಲಿನ ಸದಸ್ಯರು ಈ ಕೆಲಸಕ್ಕೋಸ್ಕರ ನೇಮಿಸಲ್ಪಟ್ಟಿರುವರೆಂದೂ, ಅವರಿಗೆ ವಿಧೇಯರಾಗಿರಬೇಕೆಂದೂ ಬಾಲಕರಿಗೆ ಮುಖ್ಯೋಪಾಧ್ಯಾಯರು ಆಗಾಗ್ಗೆ ತಿಳಿಸುತ್ತಿರಬೇಕು. ಅವಿಧೇಯರಾದ ಬಾಲಕರ ಹೆಸರುಗಳನ್ನು ಸದಸ್ಯರು ನಾಯಕನಿಗೆ ತಿಳಿಸಬೇಕು; ನಾಯಕನು ಮುಖ್ಯೋಪಾಧ್ಯಾಯರಿಗೆ ತಿಳಿಸಬೇಕು.

## ಪ್ರಯೋಜನಗಳು

1. ಶಾಲೆಯ ಬಾಲಕರ ಪ್ರಾಣರಕ್ಷಣೆಯು ಇದರ ಮುಖ್ಯೋದ್ದೇಶವಾಗಿರುತ್ತದೆ.

2. ಶಾಲೆಗಳಲ್ಲಿ ಕಲಿತ ಪ್ರಾಣರಕ್ಷಣೆಯ ನಿಬಂಧನೆಗಳನ್ನು ಆಚರಣೆಗೆ ತರುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಡುತ್ತದೆ.

3. ಬಾಲಕರು ಶಾಲೆಗೆ ಹೋಗುವಾಗ ಮತ್ತು ಅದನ್ನು ಬಿಡುವಾಗ ಜಾಗರೂಕತೆಯಿಂದ ದಾಟುವುದನ್ನಾದರೂ ನಿರ್ಬಂಧದಿಂದ ಕಲಿಯುತ್ತಾರೆ.

4. ಮಕ್ಕಳ ಮನಸ್ಸಿನಲ್ಲಿ ರಸ್ತೆಗಳಲ್ಲಿ ಸುರಕ್ಷಿತವಾಗಿ ದಾಟುವುದು, ನಡೆಯುವುದು ಮೊದಲಾದುವುಗಳ ವಿಷಯಗಳು ಚೆನ್ನಾಗಿ ಬೇರೂರಲು ಅವಕಾಶವಾಗುತ್ತದೆ. ಈ ರೀತಿ ಮಾಡುವುದಕ್ಕೆ ಪೆಟ್ರೋಲಿಗಿಂತ ಉತ್ತಮವಾದ ಸಂಸ್ಥೆಯು ಯಾವುದೂ ಇರುವುದಿಲ್ಲ.

5. ನಡತೆಯನ್ನು ತಿದ್ದುವುದಕ್ಕೆ ಇದು ಬಹಳ ಸಹಕಾರಿಯಾಗಿರುತ್ತದೆ. 'ಪ್ರಾಬ್‌ಲಮ್' (ಸಾಮಾನ್ಯ ನಿಯಮಗಳಿಗೆ ಬದ್ಧರಾಗದಿರುವ) ಬಾಲಕರನ್ನು ಈ ಕೆಲಸಕ್ಕೆ ನೇಮಿಸಿ ಅವರ ನಡತೆಯನ್ನು ತಿದ್ದುವುದಕ್ಕೆ ಇದು ಬಹಳ ಸಹಕಾರಿಯಾಗಿರುತ್ತದೆ.

## ಪ್ರಶ್ನೆಗಳು

1. ಪೆಟ್ರೋಲುಗಳನ್ನು ಸ್ಥಾಪಿಸಬೇಕಾಗಿರುವ ಅವಶ್ಯಕತೆಯೇನು ?
2. 'ಸ್ಕೂಲು ಪೆಟ್ರೋಲು' ಎಂಬುದನ್ನು ಪ್ರಥಮತಃ ಎಲ್ಲಿ ಸ್ಥಾಪಿಸಿದರು ?
3. ಇಂಡಿಯಾ ದೇಶದಲ್ಲಿ ಎಷ್ಟನೆಯ ಇಸವಿಯಲ್ಲಿ ಇದು ಸ್ಥಾಪಿಸಲ್ಪಟ್ಟಿತು?
4. ಈ ಪೆಟ್ರೋಲಿನ ಕರ್ತವ್ಯಗಳಾವುವು ?
5. ಈ ಪೆಟ್ರೋಲಿನ ಉದ್ದೇಶವು ನೆರವೇರಬೇಕಾದರೆ ಯಾರ ಸಹಾಯವು ಆವಶ್ಯಕ?
6. ಇದರ ಪ್ರಯೋಜನಗಳಾವುವು ?

# ಎಂಟನೆಯ ಅಧ್ಯಾಯ

## ಟ್ರಾಫಿಕ್ ಗೇಮ್ಸ್

ಆಟದ ಮೂಲಕ ಚಿಕ್ಕಮಕ್ಕಳ ಶಿಕ್ಷಣವನ್ನು ಏರ್ಪಡಿಸಬೇಕೆಂದು ಕೆಲವು ವಿದ್ಯಾಸುಧಾರಕರು ಸಾರಿರುವರು. ಮನಶ್ಶಾಸ್ತ್ರ ತತ್ವಗಳಿಗನುಸಾರವಾಗಿ ಮಕ್ಕಳಿಗೆ ಆಟವೆಂದರೆ ಪ್ರಾಣ. ಇವುಗಳ ಮೂಲಕ ಉಪಾಧ್ಯಾಯನ ಸಹಾಯವಿಲ್ಲದೆ ಸ್ವತಂತ್ರವಾಗಿ ಕೆಲವು ಹೊಸ ಹೊಸ ವಿಷಯಗಳನ್ನು ಬಾಲಕರೇ ಸದಾ ಕಲಿಯುತ್ತಿರುವರು. ಹೊಸ ಹೊಸ ವಿಷಯಗಳನ್ನು ಆಟಗಳ ಮೂಲಕ ಮಕ್ಕಳಿಗೆ ಸುಲಭವಾಗಿ ಕಲಿಸಬಹುದು; ಮತ್ತು ಈ ರೀತಿಯಾಗಿ ಕಲಿತ ವಿಷಯಗಳು ಬಹಳ ದಿನಗಳವರೆಗೆ ನೆನಪಿನಲ್ಲಿರುತ್ತವೆ.

ಶಾಲೆಗಳಲ್ಲಿ ಜ್ಞಾನಾರ್ಜನೆಗೆ ಮಾತ್ರ ತಕ್ಕ ಸಲಕರಣೆಗಳನ್ನು ಕಲ್ಪಿಸಿದಲ್ಲಿ ವಿದ್ಯಾಭ್ಯಾಸದ ಉದ್ದೇಶವು ಪೂರ್ಣವಾಗಿ ನೆರವೇರಲಾರದು. ಪ್ರತಿ ಬಾಲಕನು ಮತ್ತು ಬಾಲಿಕೆಯು ದೇಶದ ಯೋಗ್ಯರಾದ ಪ್ರಜೆಗಳಾಗಬೇಕು. ಇದು ಸಾಧ್ಯವಾಗಬೇಕಾದರೆ ಶಾಲೆಯಲ್ಲಿ ಕೊಡುವ ಶಿಕ್ಷಣಕ್ಕೂ ಅವರು ವಾಸವಾಗಿರುವ ಸನ್ನಿವೇಶಕ್ಕೂ ನಿಕಟಸಂಬಂಧವಿರಬೇಕು. ಈ ಉದ್ದೇಶದಿಂದ ಪ್ರಾಣರಕ್ಷಣೆಯ ಸಂಘದವರು ಟ್ರಾಫಿಕ್ ಗೇಮ್ಸ್ ಮೊದಲಾದುವುಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನು ಪ್ರಕಟಿಸಿರುತ್ತಾರೆ.[1]

ಈ ಆಟಗಳ ವರ್ಣನೆ ಮೊದಲಾದುವು ಇವುಗಳಲ್ಲಿ ವಿಶದಪಡಿಸಲ್ಪಟ್ಟಿವೆ.

ಈ ಆಟಗಳನ್ನು ಶಾಲೆಯ ಆಟದ ಮೈದಾನದಲ್ಲಿ ಆಡಿಸಬಹುದು.

(ನಿಜವಾದ ವಾಹನಗಳಿಗೆ ಬದಲು ಬಾಲಕರೇ ವಾಹನಗಳಂತೆ ವರ್ತಿಸಬೇಕು.

ಒಬ್ಬ ಬಾಲಕ ಪಾದಚಾರಿ, ಇಬ್ಬರು ಬಾಲಕರು ಸೇರಿ ಮೋಟಾರು ಕಾರು, ಮೂರು ಬಾಲಕರು ಸೇರಿ ಎಂಜನ್ನು, ಇದೇ ರೀತಿಯಾಗಿ ಇತರ ವಾಹನಗಳಿಗೆ ಬಾಲಕರನ್ನು ನೇಮಿಸಬೇಕು.)

---

[1] "Games' Lessons", 1-10 (The Safety First Association of India).

## ಒಂದನೆಯ ಆಟ

(ಆಟದ ಮೈದಾನದಲ್ಲಿ ಕಾಲುದಾರಿಯಿಲ್ಲದ ಒಂದು ರಸ್ತೆ)

ಪಾದಚಾರಿಗಳು ತಮ್ಮ ಮುಂದೆ ವಾಹನಗಳು ಬರುತ್ತಿರುವುದನ್ನು ನೋಡುತ್ತಾ ಬಲಭಾಗದಲ್ಲಿ ನಡೆಯಬೇಕು.

ರಾತ್ರಿವೇಳೆ ದೀಪಗಳಿಲ್ಲದ ರಸ್ತೆಗಳಲ್ಲಿ ತಿಳಿ ಬಣ್ಣದ ಬಟ್ಟೆಗಳನ್ನು ಧರಿಸಿಕೊಂಡು, ಇದು ಸಾಧ್ಯವಿಲ್ಲದಿರುವಲ್ಲಿ ಬಿಳಿಯ ಬಟ್ಟೆಯನ್ನೋ ಅಥವಾ ಕೈವಸ್ತ್ರವನ್ನೋ ತೋಳಿಗಾಗಲೀ ಅಥವಾ ಕುತ್ತಿಗೆಗಾಗಲೀ ಕಟ್ಟಿಕೊಂಡು ಅಥವಾ ಲಾಂದ್ರವನ್ನು ತೆಗೆದುಕೊಂಡು ಹೋಗಬೇಕು.

## ಎರಡನೆಯ ಆಟ

(ಕಾಲುದಾರಿಯುಳ್ಳ ರಸ್ತೆ)

ಪಾದಚಾರಿಗಳು ವಾಹನಗಳನ್ನು ಎದುರುನೋಡುತ್ತಾ ಬಲಭಾಗದ ಕಾಲುದಾರಿಯ ಎಡಭಾಗದಲ್ಲಿ ನಡೆಯಬೇಕು.

ಸಿಪ್ಪೆ, ಒಡೆದ ಗ್ಲಾಸ್ ಚೂರು, ಇಟ್ಟಿಗೆ ಚೂರು ಮೊದಲಾದುವುಗಳನ್ನು ದಾರಿಯಲ್ಲಿ ಇಟ್ಟಿರಬೇಕು. ದಾರಿಯಲ್ಲಿ ಚಿಲ್ಲರೆ ವ್ಯಾಪಾರಿಗಳು ಸಾಮಾನುಗಳನ್ನು ಮಾರುತ್ತಿರಬೇಕು. ದಾರಿಯಲ್ಲಿ ನಡೆಯುತ್ತಿರುವಾಗ ಬಾಲಕನು ಅಲ್ಲಿರುವ ಇಟ್ಟಿಗೆ ಚೂರು ಮೊದಲಾದುವುಗಳನ್ನು ಆರಿಸಿ ಪ್ರತ್ಯೇಕವಾದ ಸ್ಥಳದಲ್ಲಿ ಹಾಕಬೇಕು. ಮತ್ತು ಸಾಮಾನುಗಳನ್ನು ಕೊಂಡುಕೊಳ್ಳಬಾರದು.

ಮಳೆ ಬರುತ್ತಾ ಇರುತ್ತದೆ. ಛತ್ರಿಯನ್ನು ಹಿಡಿದುಕೊಂಡು ಹೋಗಬೇಕು. ನೆಟ್ಟಗೆ ಹಿಡಿದುಕೊಳ್ಳಬೇಕು. ಮತ್ತೊಬ್ಬನು ಎದುರಿಗೆ ಬರುತ್ತಿರುವಾಗ ಒಂದು ಪಕ್ಕಕ್ಕೆ ಹಿಡಿದುಕೊಳ್ಳಬೇಕು. ನಡೆಯುತ್ತಿರುವಾಗ ಒಬ್ಬ ಪಾದಚಾರಿಗೆ ಗಾಜಿನ ಚೂರು ಕಾಲೊಳಗೆ ಹೋಗಿ ಘಾಯವಾಗಿ ರಕ್ತ ಬರುವುದು. ಕೂಡಲೇ ರಕ್ತವು ಹೆಚ್ಚು ಬರದಂತೆ ಮಾಡಿ, ಘಾಯಕ್ಕೆ ಡ್ರೆಸ್‌ಮಾಡಿ ಆಸ್ಪತ್ರೆಗೆ ಸಾಗಿಸಬೇಕು.

ಬಾಳೆಹಣ್ಣಿನ ಸಿಪ್ಪೆಯಮೇಲೆ ಕಾಲಿಟ್ಟು ಜಾರಿದುದರಿಂದ ಒಬ್ಬ ಪಾದಚಾರಿಯ ಕಾಲು ಮುರಿಯುತ್ತದೆ. ಪ್ರಥಮ ಚಿಕಿತ್ಸೆಮಾಡಬೇಕು.

ಛತ್ರಿಯನ್ನು ಸರಿಯಾಗಿ ಹಿಡಿದುಕೊಳ್ಳದೆ ಎದುರು ಬರುತ್ತಿರುವ ಪಾದಚಾರಿಯ ಕಣ್ಣಿನೊಳಗೆ ಛತ್ರಿಯ ಕಡ್ಡಿಯನ್ನು ಸಿಗಿಸಿ ನೋವನ್ನುಂಟು ಮಾಡುವನು. ಪ್ರಥಮ ಚಿಕಿತ್ಸೆಮಾಡಬೇಕು.

## ಮೂರನೆಯ ಆಟ

(ರಸ್ತೆಯನ್ನು ದಾಟುವುದು)

ನೇರವಾದ ರಸ್ತೆ ಮತ್ತು ಒಂದು ಕ್ರಾಸು ರೋಡು. ವಾಹನಗಳು ಹೋಗಿಬರುವುವು. ಪಾದಚಾರಿಗಳು ಕಾಲುದಾರಿಯಲ್ಲಿ ನಡೆಯುತ್ತಿರುವರು (ಕಾಲುದಾರಿಯಿಲ್ಲದಿರುವಲ್ಲಿ ರಸ್ತೆಯ ಅಂಚಿನಲ್ಲಿ ನಡೆಯುತ್ತಿರುವರು). ನಿಬಂಧನೆಗಳಿಗನುಸಾರವಾಗಿ ದಾಟಬೇಕಾಗಿರುತ್ತದೆ.

ರಸ್ತೆಯ ಅಂಚಿನಲ್ಲಿ ನಿಲ್ಲುವುದು, ಅನಂತರ ಬಲಭಾಗದಲ್ಲಿ ವಾಹನಗಳು ಬರುವುದನ್ನು ನೋಡುವುದು. ರಸ್ತೆಯು ಖಾಲಿಯಾಗಿರುವಲ್ಲಿ ರಸ್ತೆಯ ಮಧ್ಯಕ್ಕೆ ತೀವ್ರವಾಗಿ ನಡೆಯುವುದು. ಎಡಕ್ಕೆ ನೋಡಿ ಅನಂತರ ಮುಂದಕ್ಕೆ ಹೋಗುವುದು. ರಸ್ತೆಯನ್ನು ದಾಟುವುದು ಪಾದಚಾರಿಗಳ ಕಾರ್ಯಗಳಲ್ಲಿ ಮುಖ್ಯವಾಗಿರುವುದರಿಂದ ಈ ವಿಷಯದಲ್ಲಿ ಸರಿಯಾದ ಸಲಹೆಗಳು ಮತ್ತು ಶಿಕ್ಷಣವು ಆವಶ್ಯಕ. ಕಾಲುದಾರಿಯಲ್ಲಿ ತರಗತಿಯ ಬಾಲಕರನ್ನೆಲ್ಲಾ ಸೇರಿಸಿ ಈ ರೀತಿ ಅವರಿಂದಲೇ ಹೇಳಿಸಬೇಕು. **"ನಾನು ನಿಲ್ಲುತ್ತೇನೆ. ನೋಡುತ್ತೇನೆ. ಕೇಳುತ್ತೇನೆ. ಬಲ ಭಾಗಕ್ಕೆ ನೋಡುತ್ತೇನೆ. ಕೆಲವು ಗಜ ಮುಂದಕ್ಕೆ ಹೋಗುತ್ತೇನೆ, ಅನಂತರ ಎಡಕ್ಕೆ ನೋಡುತ್ತೇನೆ. ಆಮೇಲೆ ಮುಂದಕ್ಕೆ ಹೋಗುತ್ತೇನೆ."**

ಅಪಾಯಗಳಾಗುವುದನ್ನು ಪ್ರದರ್ಶಿಸುವುದು. ರಸ್ತೆಯನ್ನು ದಾಟುತ್ತಿರುವಾಗ ಎಡವಿಬಿದ್ದ ಒಬ್ಬ ಬಾಲಕನ ಮೇಲೆ ಮೋಟಾರು ಕಾರು ಹಾದುಹೋಗುವುದು.

ರಸ್ತೆಗಳು ಸಂಧಿಸುವ ಜಾಗದಲ್ಲಿ ದಾಟುವಾಗ ಒಬ್ಬ ಪಾದಚಾರಿಯ ಮೇಲೆ ವಾಹನವು (ಟಾಂಗಾ) ಹಾದುಹೋಗುವುದು.

ದಾಟುತ್ತಿರುವಾಗ ಕೆಲವುವೇಳೆ ಥಟಕ್ಕನೆ ನಿಲ್ಲಬೇಕಾದ ಆವಶ್ಯಕತೆ.

## ನಾಲ್ಕನೆಯ ಆಟ

(ಟ್ರಾಫಿಕ್ ಪೋಲೀಸ್)

ದಾಟತಕ್ಕ ಸ್ಥಳಗಳಲ್ಲಿ ವಾಹನಗಳ ಸಂಚಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕೆ ಪೋಲೀಸಿನವನು ನಿಂತಿರುತ್ತಾನೆ.

ಪಾದಚಾರಿಗಳು ಪೋಲೀಸಿನವನ ಸಂಕೇತಗಳಿಗನುಸಾರವಾಗಿಯೂ, "ನಿಲ್ಲು, ನೋಡು, ಕೇಳು" ಎಂಬ ನಿಯಮಕ್ಕನುಸಾರವಾಗಿಯೂ ದಾಟಬೇಕು. ಬಾಲಕರಿಗೆ ಈ ರೀತಿ ಮಾಡುವುದರಿಂದಾಗುವ ಪ್ರಯೋಜನಗಳನ್ನು ತಿಳಿಸಬೇಕು.

## ಐದನೆಯ ಆಟ

(ಮಿಶ್ರವಾದುದು)

[ಉದ್ದವಾದ ರಸ್ತೆ—ಪಾದಚಾರಿಯು ದಾಟುತ್ತಿರುವನು. ದಾಟುವುದಕ್ಕೋಸ್ಕರ ಪ್ರತ್ಯೇಕ ಸ್ಥಳ—ವಾಹನಗಳು ಸಂಚರಿಸುತ್ತಿರುವುವು. ಒಬ್ಬ ಕುರುಡ ಮತ್ತು ಒಬ್ಬ ಚಿಕ್ಕಹುಡುಗ ಇವರು ರಸ್ತೆಯ ಪಕ್ಕದಲ್ಲಿ ಕಾಯುತ್ತಿರುವರು.]

ಪಾದಚಾರಿಗಳು ಗೊತ್ತಾದ ಸ್ಥಳದಲ್ಲಿಯೇ ನಿಯಮಕ್ಕನುಸಾರವಾಗಿ ದಾಟಬೇಕು.

ಗೊತ್ತಾದ ಸ್ಥಳದಲ್ಲಿ ದಾಟದೆ ಬೇರೆ ಸ್ಥಳದಲ್ಲಿ ದಾಟಲು ಯತ್ನಿಸಿದರೆ ಅಪಾಯಕ್ಕೆ ಗುರಿಯಾಗಬಹುದೆಂಬುದನ್ನು ತಿಳಿಸಬೇಕು.

ಕಾಯುತ್ತಿರುವ ಒಬ್ಬ ಕುರುಡ ಮತ್ತು ಒಬ್ಬ ಹುಡುಗ—ಇವರ ಹತ್ತಿರಕ್ಕೆ ಒಬ್ಬ ಅನುಭವಸ್ಥನಾದ ಮತ್ತು ಶಿಕ್ಷಿತನಾದ ಪಾದಚಾರಿಯು ಹೋಗಿ ಸಹಾಯಮಾಡಲೇ ಎಂದು ಕೇಳಬೇಕು. ಈ ಸಂದರ್ಭದಲ್ಲಿ ಪಾದಚಾರಿಯ ಜವಾಬ್ದಾರಿಯು ಹೆಚ್ಚಾಗಿರುತ್ತದೆ.

### ಸಂಭಾಷಣೆ

I. ಬಾಲಕರು.—ಉಪಾಧ್ಯಾಯರೇ, ಕಾಲುದಾರಿಗಳಿಲ್ಲದ ರಸ್ತೆಗಳಲ್ಲಿ ಹೇಗೆ ನಡೆಯಬೇಕೆಂಬುದನ್ನು ಈ ದಿವಸ ದಯವಿಟ್ಟು ತಿಳಿಸುವಿರಾ?

ಉಪಾಧ್ಯಾಯ.— ಬಾಲಕರೇ, ಈ ದಿವಸ ಸಾಯಂಕಾಲ ಇದನ್ನು ಆಟದ ಮೂಲಕ ತಿಳಿಸುತ್ತೇನೆ.

II. ಬಾಲಕರು.— ಉಪಾಧ್ಯಾಯರೇ, ನಿನ್ನೆ ದಿನ ಕಾಲುದಾರಿಗಳಿಲ್ಲದ ರಸ್ತೆಯಲ್ಲಿ ಹೇಗೆ ನಡೆಯಬೇಕೆಂಬುದನ್ನು ಕಲಿತೆವು. ಕಾಲುದಾರಿಗಳಿರುವ ರಸ್ತೆಗಳಲ್ಲಿ ಸುಖವಾಗಿ ಹೇಗೆ ದಾಟಬೇಕೆಂಬುದನ್ನು ದಯವಿಟ್ಟು ಕಲಿಸುವಿರಾ?

ಉಪಾಧ್ಯಾಯ.— ಬಾಲಕರೇ, ಒಳ್ಳೆಯ ಪ್ರಶ್ನೆಯನ್ನೇ ಕೇಳಿರುವಿರಿ. ಇದನ್ನು ಕಲಿಸತಕ್ಕ ಆಟವೂ ಇದೆ. ಅದರ ಮೂಲಕ ಈ ದಿವಸ ಸಾಯಂಕಾಲ ಇದನ್ನು ತಿಳಿಸುತ್ತೇನೆ.

III. ಒಬ್ಬ ಬಾಲಕ.— ಉಪಾಧ್ಯಾಯರೇ, ನನ್ನ ತಮ್ಮನು ಈ ದಿವಸ ಪ್ರಾತಃಕಾಲ ರಸ್ತೆಯನ್ನು ದಾಟುತ್ತಿರುವಾಗ ಒಂದು ಕುದುರೆ ಗಾಡಿಯು ಅವನಮೇಲೆ ಹರಿದುಹೋಗಿ, ಕಾಲು ಮುರಿದುಹೋಯಿತು. ಅಪಾಯಗಳಿಗೆ ಈಡಾಗದಂತೆ ಸುರಕ್ಷಿತವಾಗಿ ದಾಟುವುದು ಹೇಗೆಂಬುದನ್ನು ದಯವಿಟ್ಟು ತಿಳಿಸುತ್ತೀರಾ?

ಉಪಾಧ್ಯಾಯ.— ಮಗು, ನೀನು ಕೇಳಿದ ಪ್ರಶ್ನೆಯು ಬಹು ಮುಖ್ಯವಾದುದು. ಪ್ರತಿಯೊಬ್ಬ ಬಾಲಕನೂ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆ ವರ್ತಿಸಬೇಕಾಗಿರುತ್ತದೆ. ತರಗತಿಯ ಬಾಲಕರಿಗೆಲ್ಲಾ ಇದನ್ನು ಈ ದಿವಸ ಆಟದ ಮೂಲಕ ತಿಳಿಸುತ್ತೇನೆ.

IV. ವಿದ್ಯಾರ್ಥಿ.— ಉಪಾಧ್ಯಾಯರೇ, ವಾಹನಗಳು ಹೆಚ್ಚಾಗಿ ಹೋಗಿಬರುವ ಸ್ಥಳಗಳಲ್ಲಿ ಪೋಲೀಸಿನವರು ನಿಂತಿರುತ್ತಾರೆ. ಕಾರಣವೇನು? ಅವರನ್ನು ಯಾರು ನಿಲ್ಲಿಸಿರುತ್ತಾರೆ? ಅವರು ಕೈ ಸಂಜ್ಞೆಗಳನ್ನು ಏಕೆ ಮಾಡುತ್ತಾರೆ? ಅವುಗಳ ಅರ್ಥವೇನು? ಇವುಗಳನ್ನು ದಯವಿಟ್ಟು ತಿಳಿಸುವಿರಾ?

ಉಪಾಧ್ಯಾಯ.— ಈ ವಿಷಯವನ್ನು ತರಗತಿಯ ಬಾಲಕರೆಲ್ಲರೂ ತಿಳಿದುಕೊಳ್ಳಬೇಕಾಗಿರುತ್ತದೆ. ಆದುದರಿಂದ, ಬಾಲಕರೇ, ನೀವೆಲ್ಲರೂ ಈ ದಿವಸ ಸಾಯಂಕಾಲ ಆಟದ ಮೈದಾನದಲ್ಲಿ 5 ಘಂಟೆಗೆ ಹಾಜರಿರಿ.

ಮೊದಲು ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ಅನಂತರ ಒಂದು ಆಟ ವನ್ನು ಆಡಿಸುತ್ತೇನೆ.

V. ಬಾಲಕ.—ಉಪಾಧ್ಯಾಯರೇ, ನಿನ್ನೆ ದಿನ ಒಬ್ಬ ಕುರುಡ ಮತ್ತು ಒಬ್ಬ ಚಿಕ್ಕಹುಡುಗ, ಇವರಿಬ್ಬರು ದಾಟುವುದಕ್ಕಾಗಿ ರಸ್ತೆಯ ಪಕ್ಕದಲ್ಲಿ ಕಾದಿದ್ದರು. ದಾಟಸಬೇಕೆಂದು ನನ್ನನ್ನು ಕೇಳಿದರು. ಆಗುವುದಿಲ್ಲ ವೆಂದು ಹೇಳಿ ಮುಂದಕ್ಕೆ ಹೊರಟುಹೋದೆನು. ಮನೆಗೆ ಹೋದಮೇಲೆ ತಂದೆಗೆ ಈ ವಿಷಯವನ್ನು ತಿಳಿಸಿದೆನು. "ಹೀಗೆ ಏಕೆ ಮಾಡಿದೆ? ಅಂತಹ ಸಂದರ್ಭದಲ್ಲಿ ನಿನ್ನ ಕರ್ತವ್ಯವೇನು? ಏನು ಮಾಡಬೇಕೆಂಬು ದನ್ನು ನಿನ್ನ ಉಪಾಧ್ಯಾಯರನ್ನು ಕೇಳು?" ಎಂದು ಅವರು ನನಗೆ ಹೇಳಿದರು.

ಉಪಾಧ್ಯಾಯ.—ಮಗು, ಅವರನ್ನು ನೀನು ದಾಟಿಸದಿದ್ದುದು ತಪ್ಪು. ಆದರೂ ಅದನ್ನು ತಿಳಿದುಕೊಳ್ಳಲು ಯತ್ನಿಸುತ್ತಿರುವುದು ಶ್ಲಾಘ್ಯ ವಾದುದು. ಸುರಕ್ಷಿತವಾಗಿ ಅಂತಹವರನ್ನು ಹೇಗೆ ದಾಟಿಸಬೇಕು? ಏಕೆ ದಾಟಿಸಬೇಕು? ಇವೇ ಮೊದಲಾದುವುಗಳನ್ನು ತಿಳಿಸುತ್ತೇನೆ. ನಿನ್ನ ಸ್ನೇಹಿತರೆಲ್ಲರನ್ನೂ ಕರೆದುಕೊಂಡು ಆಟದ ಮೈದಾನಕ್ಕೆ ಈ ದಿವಸ ಬಾ.

# ಒಂಭತ್ತನೆಯ ಅಧ್ಯಾಯ

ಪ್ರಾಣರಕ್ಷಣೆಗೆ ಸಂಬಂಧವಾದ ಕಾನೂನುಗಳನ್ನು ಮಾಡಿದ ಮಾತ್ರಕ್ಕೆ ಹೆಚ್ಚು ಪ್ರಯೋಜನವಾಗಲಾರದು. ಅವುಗಳನ್ನು ಆಚರಣೆಗೆ ತರತಕ್ಕ ಏರ್ಪಾಡುಗಳು ಸಮರ್ಪಕವಾಗಿರಬೇಕು. ಈ ಸಂದರ್ಭದಲ್ಲಿ ಅನೇಕ ಸಂಸ್ಥೆಗಳು ಸಹಕರಿಸಿ ಕೆಲಸ ಮಾಡಿದಲ್ಲಿ ಪ್ರಾಣರಕ್ಷಣೆಯ ಸಂಸ್ಥೆಯ ಉದ್ದೇಶವು ಸಂಪೂರ್ಣವಾಗಿ ನೆರವೇರಲು ಸಾಧ್ಯವಿರುತ್ತದೆ. ಈ ಸಂಸ್ಥೆಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

1. ಪೋಲೀಸ್ ಇಲಾಖೆ, 2. ಮ್ಯುನಿಸಿಪಾಲಿಟಿ, 3. ಸಾಮಾಜಿಕ ಸಂಸ್ಥೆಗಳು, 4. ಕೋರ್ಟುಗಳು, 5. ಮೆಡಿಕಲ್ ಇಲಾಖೆ, 6. ಬಸ್ಸುಗಳ ಮತ್ತು ಕಾರ್ಖಾನೆಗಳ ಮಾಲೀಕರು, 7. ವಿದ್ಯಾಭ್ಯಾಸದ ಇಲಾಖೆ.

**I. ಪೋಲೀಸ್ ಇಲಾಖೆ.—**

ಪೋಲೀಸಿನವರ ಪ್ರಥಮ ಕರ್ತವ್ಯವು ಪ್ರಾಣರಕ್ಷಣೆಯಾಗಿರುತ್ತದೆ.[1]

ಈ ಇಲಾಖೆಯವರ ಕರ್ತವ್ಯಗಳಲ್ಲಿ ಕೆಲವನ್ನು ಇಲ್ಲಿ ತಿಳಿಸಿದೆ:—

1. ವಾಹನಗಳು ಹೆಚ್ಚಾಗಿ ಹೋಗಿಬರುವ ಜಾಗದಲ್ಲಿ ಪೋಲೀಸಿನವರನ್ನು ಇಟ್ಟು ಪಾದಚಾರಿಗಳಿಗೂ ವಾಹನಗಳನ್ನು ನಡೆಯಿಸುವವರಿಗೂ ಸರಿಯಾದ ಕೈಸಂಜ್ಞೆಗಳನ್ನು ಕೊಡುವಂತೆ ಏರ್ಪಡಿಸುವುದು;

2. ತಪ್ಪಿತಸ್ಥರನ್ನು ಕಂಡುಹಿಡಿದು ತಪ್ಪಿಗೆ ತಕ್ಕ ಶಿಕ್ಷೆಯನ್ನು ಕೊಡಿಸುವುದು;

3. ಈ ಕೆಲಸಗಳನ್ನು ಸಮರ್ಪಕ ರೀತಿಯಲ್ಲಿ ಮಾಡುವುದಕ್ಕೆ ಸಹಕಾರಿಯಾದ ಶಿಕ್ಷಣವನ್ನು ಪೋಲೀಸಿನವರಿಗೆ ಕೊಡಿಸುವುದು ಮತ್ತು ಅವರು ಸರಿಯಾಗಿ ಕೆಲಸಮಾಡುವಂತೆ ಮೇಲ್ವಿಚಾರಣೆ ಮಾಡುವುದು.

4. ಜನರ ಹಿತಕ್ಕಾಗಿ ನೇಮಿಸಲ್ಪಟ್ಟಿರುವ ಪೋಲೀಸಿನವರ ಕೈ ಸಂಜ್ಞೆ, ಬುದ್ಧಿವಾದ, ಸಲಹೆ ಮೊದಲಾದುವುಗಳನ್ನು ಪಾಲಿಸ

---

[1] "The Primary duty of the Police is 'the Protection of Life'."

ಬೇಕಾಗಿರುವುದು ಪ್ರತಿಯೊಬ್ಬನ ಕರ್ತವ್ಯವೆಂಬ ಭಾವನೆಯು ಉತ್ಪನ್ನವಾಗುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವುದು.[1]

5. ಮೋಟಾರು ಸೈಕಲ್, ಕಾರು, ಬಸ್ಸು, ಲಾರಿ ನಡೆಯಿಸುವವರಿಗೆ ಯೋಗ್ಯತಾ ಪತ್ರಿಕೆಗಳನ್ನು ಮಂಜೂರು ಮಾಡುವುದು.

**II. ಮ್ಯುನ್ಸಿಪಾಲಿಟಿ**

1. ವಾಹನಗಳ ಮತ್ತು ಪಾದಚಾರಿಗಳ ಸಂಚಾರಕ್ಕೆ ಅನುಕೂಲವಾಗುವಂತೆ ಪಟ್ಟಣಗಳಲ್ಲಿ ರಸ್ತೆಗಳನ್ನು ಸಮರ್ಪಕವಾದ ಸ್ಥಿತಿಯಲ್ಲಿಡುವುದು ;

2. ಕಾಲುದಾರಿಗಳನ್ನು ಏರ್ಪಡಿಸಿ, ಅವುಗಳನ್ನು ಸರಿಯಾದ ಸ್ಥಿತಿಯಲ್ಲಿಡುವುದು ;

3. ವಾಹನ ನಡೆಯಿಸುವವರಿಗೆ ಎಚ್ಚರಿಕೆಗಳನ್ನು ಸೂಚಿಸುವ ಬೋರ್ಡು, ಕಂಭ ಮೊದಲಾದುವುಗಳನ್ನು ಏರ್ಪಡಿಸುವುದು ;

4. ವಾಹನಗಳು ನಿಲ್ಲುವುದಕ್ಕೆ ಬೇಕಾದ ಪ್ರತ್ಯೇಕ ಸ್ಥಳಗಳನ್ನು ಏರ್ಪಡಿಸುವುದು ;

5. ಸೈಕಲ್, ಟಾಂಗಾ ಮೊದಲಾದುವುಗಳಿಗೆ ಲೈಸೆನ್ಸ್ ಕೊಡುವುದರ ಮೂಲಕ ಅವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ;

6. ಈಜುವುದನ್ನು ಕಲಿಯುವುದಕ್ಕೆ ಬೇಕಾದ ಶಿಕ್ಷಣ, ಇತರ ಸೌಕರ್ಯಗಳನ್ನು ಕಲ್ಪಿಸುವುದು ;

7. ಪ್ರಾಣರಕ್ಷಣೆಗೆ ಬೇಕಾದ ಇತರ ಸೌಕರ್ಯಗಳನ್ನು ಏರ್ಪಡಿಸುವುದು ;

8. ಮಕ್ಕಳ ಆಟದ ಮೈದಾನ, ವಿಹಾರಸ್ಥಳ ಮೊದಲಾದುವುಗಳನ್ನು ಏರ್ಪಡಿಸಿರುವುದು — ಇವು ಈ ಸಂಸ್ಥೆಗಳಿಗೆ ಸೇರಿದುವುಗಳು.

---

1 ಸ್ಟ್ಯಾಲ್‌ಫರ್ಡ್ ಸಿಟಿಯ ಪೋಲೀಸಿನವರು ಶಾಲೆಯ ಮಕ್ಕಳಿಗೆ ಪ್ರಾಣರಕ್ಷಣೆಯ ಶಿಕ್ಷಣವನ್ನು ಕೊಡುತ್ತಿರುವ ಕ್ರಮವು ಗಮನಾರ್ಹವಾಗಿರುತ್ತದೆ. ಇದರ ವಿಷಯವನ್ನು ಸಂಪೂರ್ಣವಾಗಿ ತಿಳಿಯಲಪೇಕ್ಷೆಯುಳ್ಳವರು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನವರು ಪ್ರಚುರಪಡಿಸಿರುವ "Road Sense for Children, by Major C. V. Godfrey" ಎಂಬ ಪುಸ್ತಕವನ್ನು ಓದಬಹುದು.

### III. ಸಾಮಾಜಿಕ ಸಂಸ್ಥೆಗಳು

ಅನೇಕ ಆಕಸ್ಮಿಕ ಅಪಾಯುಗಳಿಗೆ ಈಡಾಗಿ ಅಂಗವಿಹೀನರಾಗಿ ಕಷ್ಟಪಡುತ್ತಿರುವ ಅನಾಥರಿಗೋಸ್ಕರ ಏರ್ಪಡಿಸಿರುವ ಸಂಸ್ಥೆಗಳು ಸಮರ್ಪಕವಾಗಿ ಕೆಲಸಮಾಡುವಂತೆ ಸರ್ಕಾರದವರೂ, ಇತರ ಸಂಸ್ಥೆಗಳೂ ಸಹಾಯಮಾಡಬೇಕು. ಸಾರ್ವಜನಿಕರ ಸೇವೆಗಾಗಿ ಏರ್ಪಡಿಸಲ್ಪಟ್ಟಿರುವ ಸಂಸ್ಥೆಗಳು ಅನೇಕವಿರುತ್ತವೆ. ಇವು ಪ್ರಾಣರಕ್ಷಣೆಯ ಸಂಸ್ಥೆಯವರಿಗೆ ಅನೇಕ ವಿಧವಲ್ಲಿ ಸಹಾಯಮಾಡಬಹುದು.

### IV. ಕೋರ್ಟುಗಳು

ಪೋಲೀಸಿನವರು ತಪ್ಪಿತಸ್ಥರನ್ನು ಕಂಡುಹಿಡಿದು ಅವರಮೇಲೆ ಕೇಸನ್ನು ಮಾಡುವರು. ವಿಚಾರಣೆಮಾಡಿ ತಪ್ಪಿತಸ್ಥರೆಂದು ಕಂಡು ಬಂದಲ್ಲಿ ಅವರಿಗೆ ಶಿಕ್ಷೆ ಮೊದಲಾದುವುಗಳನ್ನು ಕೊಡುವುದು ಕೋರ್ಟು ಗಳಿಗೆ ಸೇರಿರುತ್ತದೆ. ತಪ್ಪಿತಸ್ಥರಿಗೆ ಶಿಕ್ಷೆಯಾಗದಿರುವಲ್ಲಿ ಇತರರು ಸ್ವೇಚ್ಛೆಯಾಗಿ ತಪ್ಪುಮಾಡಿ ತಾವೂ ಕಷ್ಟಪಡುವುದಲ್ಲದೆ, ಇತರರಿಗೂ ಅನೇಕ ತೊಂದರೆಗಳನ್ನು ಕೊಡುವರು. ಆದುದರಿಂದ ಶಿಕ್ಷೆಯು ಆವಶ್ಯಕ.

### V. ಮೆಡಿಕಲ್ ಇಲಾಖೆ

ಆಕಸ್ಮಿಕ ಅಪಾಯುಗಳಿಗೆ ಈಡಾಗಿ ಕೈಕಾಲು ಮೊದಲಾದುವುಗಳನ್ನು ಕಳೆದುಕೊಂಡು ನರಳುತ್ತಿರುವವರಿಗೆ ಸರಿಯಾದ ಚಿಕಿತ್ಸೆಯು ಆವಶ್ಯಕ. ಒಂದು ವಿಧದಲ್ಲಿ ಪ್ರಾಣವನ್ನು ಕಳೆದುಕೊಂಡವರು ಪುಣ್ಯವಂತರೆಂದು ಹೇಳಬಹುದು. ಅಂಗಹೀನರಾಗಿ ಸಾಯುವವರೆಗೂ ನರಳುತ್ತಿರುವವರು ತಾವೂ ಕಷ್ಟಪಡುತ್ತಿರುವರಲ್ಲದೆ, ಇತರರಿಗೂ ತೊಂದರೆಗಳನ್ನುಂಟು ಮಾಡುತ್ತಿರುವರು. ಹೀಗಿರುವುದರಿಂದ ಈ ಇಲಾಖೆಯವರು ಸಾಧ್ಯ ವಾದಷ್ಟು ಉಪಕಾರಮಾಡಿ ಅಂಗವಿಹೀನರು ಮತ್ತು ಇತರರು ಸುಖ ವಾಗಿ ಜೀವನ ಮಾಡುವುದಕ್ಕೆ ಅವಕಾಶವನ್ನು ಕಲ್ಪಿಸಬೇಕಾಗಿರುತ್ತದೆ.

### VI. ಬಸ್ಸು ಮತ್ತು ಕಾರ್ಖಾನೆಯ ಮಾಲೀಕರು

ಹೆಚ್ಚಾಗಿ ಲಾಭವನ್ನು ಸಂಪಾದಿಸಬೇಕೆಂಬ ಉದ್ದೇಶದಿಂದ ಕಾರ್ಖಾನೆ ಮೊದಲಾದುವುಗಳನ್ನು ಸ್ಥಾಪಿಸಿ ಜನರ ಯೋಗಕ್ಷೇಮ ಮೊದಲಾದುವುಗಳಿಗೆ ಗಮನಕೊಡದೆ ಕೆಲಸವನ್ನು ನಡೆಯಿಸುವುದಾದರೆ

ಜನರಿಗೆ ಅನೇಕ ತೊಂದರೆಗಳಾಗಬಹುದು. ಮುಖ್ಯವಾಗಿ ಈ ಮಾಲೀಕರು ಜನರ ಯೋಗಕ್ಷೇಮ ಮೊದಲಾದುವುಗಳಿಗೆ ಗಮನಕೊಡಬೇಕಾಗಿರುತ್ತದೆ. ಹೀಗೆ ಮಾಡದೆ ಲಾಭದ ಕಡೆಗೇ ಹೆಚ್ಚು ದೃಷ್ಟಿಯನ್ನು ಇಟ್ಟು ಕೆಲಸವನ್ನು ನಡೆಯಿಸಿದಲ್ಲಿ, ಜನರಿಗೂ ಕೆಲಸಗಾರರಿಗೂ ಅನೇಕ ಕಷ್ಟಗಳು ಪ್ರಾಪ್ತವಾಗಿ ಮುಷ್ಕರ ಮೊದಲಾದುವುಗಳು ಪ್ರಾರಂಭವಾಗುವುವು. ಆದುದರಿಂದ ಈ ಮಾಲೀಕರು ಸಹ ಪ್ರಾಣರಕ್ಷಣೆಯ ಸೌಕರ್ಯಗಳನ್ನು ಏರ್ಪಡಿಸಬೇಕಾಗಿರುತ್ತದೆ. ಸರ್ಕಾರದವರ ಸಹಾಯವನ್ನು ಈ ಮಾಲೀಕರು ಅನೇಕ ವಿಧದಲ್ಲಿ ಅಪೇಕ್ಷಿಸುವರು. ಆದುದರಿಂದ ಸರ್ಕಾರದವರು ಆಗಾಗ್ಗೆ ಮೇಲ್ವಿಚಾರಣೆ ಮಾಡುತ್ತಾ ತೊಂದರೆಗಳಿರುವಲ್ಲಿ ನಿವಾರಣೋಪಾಯಗಳನ್ನು ಕೈಕೊಳ್ಳಬೇಕಾಗಿರುತ್ತದೆ.

## VII. ವಿದ್ಯಾಭ್ಯಾಸದ ಇಲಾಖೆ

ಈ ಇಲಾಖೆಯವರು ಬಾಲಚಮೂ ಸಂಸ್ಥೆಯ ವಿಷಯದಲ್ಲಿ ಹೆಚ್ಚು ಮುತವರ್ಜಿಯನ್ನು ವಹಿಸಿ ಪ್ರತಿ ಶಾಲೆಯಲ್ಲಿಯೂ ಇದರ ಶಿಕ್ಷಣಕ್ಕೆ ಏರ್ಪಾಡುಗಳನ್ನು ಮಾಡಿರುವರು. ಹೊಸ ಸುಧಾರಣೆಗಳು ಸಮಾಜವಲ್ಲಿ ಆಗಬೇಕಾದರೆ ಅವುಗಳ ಶಿಕ್ಷಣವು ಶಾಲೆಗಳಲ್ಲಿ ಪ್ರಾರಂಭವಾಗಬೇಕು.

ಆದುದರಿಂದ ಪ್ರಾಣರಕ್ಷಣೆಯ ಶಿಕ್ಷಣಕ್ಕೆ ಅವಕಾಶವನ್ನು ಕಲ್ಪಿಸಬೇಕಾಗಿರುವುದು ಈ ಇಲಾಖೆಗೆ ಸೇರಿರುತ್ತವೆ. ವಿದ್ಯಾಭ್ಯಾಸದ ಉದ್ದೇಶವು ಬಾಲಕರ ನಡತೆಯನ್ನು ತಿದ್ದಿ ಅವರನ್ನು ಸತ್ಪ್ರಜೆಗಳನ್ನಾಗಿ ಮಾಡಿ, ಸುಖವಾಗಿ ಬಾಳುವಂತೆ ಮಾಡುವುದಾಗಿರುತ್ತದೆ. ಆದುದರಿಂದ ಪ್ರಾಣರಕ್ಷಣೆಯ ಸಂಸ್ಥೆಗೂ ಈ ಇಲಾಖೆಗೂ ನಿಕಟ ಸಂಬಂಧವಿರುತ್ತದೆ. ಬಾಲಚಮೂ ಸಂಸ್ಥೆಗಳ ಮೂಲಕ ಈ ಇಲಾಖೆಯವರು ಇದರ ಶಿಕ್ಷಣ ಮೊದಲಾದುವನ್ನು ಏರ್ಪಡಿಸಬಹುದು.

### ಪ್ರಶ್ನೆಗಳು

1. ಪ್ರಾಣರಕ್ಷಣೆಗೆ ಸಂಬಂಧಪಟ್ಟ ಕಾನೂನುಗಳನ್ನು ಮಾಡಿದ ಮಾತ್ರಕ್ಕೆ ಸಾಲದು. ಕಾರಣವೇನು?
2. ಪ್ರಾಣರಕ್ಷಣೆಯ ಸಂಸ್ಥೆಯ ಉದ್ದೇಶವು ಸಂಪೂರ್ಣವಾಗಿ ನೆರವೇರಬೇಕಾದರೆ ಇತರ ಸಂಸ್ಥೆಗಳ ಸಹಕಾರವು ಅತ್ಯಾವಶ್ಯಕ. ಈ ಸಂಸ್ಥೆಗಳಾವುವು? ಅವುಗಳ ಮುಖ್ಯ ಕರ್ತವ್ಯಗಳಾವುವು?

## OPINIONS

**A. S. Trollip, Esq., B.Sc., Hon. Joint General Secretary, The Safety First Association of India (Devoted to the Conservation of Life and Property), Electric House, Fort, Bombay,** *dated* 13th *October* 1938.—

"Your letter of the 16th brought very pleasant news. The synopsis you have sent is very good indeed. I am sure your book will be a splendid contribution to safety propaganda in this country. It is sure to be a popular publication. I congratulate you on it."

* * *

**Rajasevasakta B. M. Srikantia, Esq., M.A., B.L., Professor of English, Central College, Bangalore,** *dated* 28*th November* 1938.—

"I have read through Mr. Venkobachar's *Safety First Reader* in Kannada and find it a very well written book, containing all necessary ideas on the subject. It should be of great use to the younger generation."

* * *

**B. Puttaiya, Esq., B.A., Hon. Secretary, The Mysore Civic and Social Progress Association, Bangalore,** *dated* 22*nd October* 1938.—

"I have read through the Manuscripts of the *Safety First Reader* prepared by Mr. M. Venkobachar, B.A., B.T., Head Master, Middle School, Chamarajpet, Bangalore City. I am glad to be able to state that the book fulfils a real want in these days of rapid locomotion and extensive electrical service. The author has dealt with all types of accidents that are likely to occur on land, air and water, in homes and roads and in theatres and crowded places. Clear directions with illustrations are given showing how to avoid such accidents.

The book contains useful suggestions and timely warnings and is sure to be well received and widely read. It will be an ideal Reader for study in schools as it is beneficial to the country to inculcate these modern ideas on Safety First Methods to the pupils in their impressionable age."

* * *

**F. A. Hamilton, Esq., C.I.E., Inspector-General of Police in Mysore, Bangalore,** *dated* 22*nd November* 1938.—

"The pam[illegible] [illegible]cation for the purpose for wh[illegible]



**D. Venkataramiah, Esq., B.A., L.T., Retired Circle Inspector of Education, Basavangudi, Bangalore City,** *dated 30th October* 1938.—

" In these days of rapid conveyances like the Motor Car, the Passenger Bus and the Motor-cycle it is imperative that traffic in big cities should be well controlled as otherwise disastrous risks to ' life and limb ' cannot be avoided. Not only the persons at the wheel but the pedestrians as well require proper guidance in order that they may not jeopardise each other. If only to minimise the number of accidents, the inculcation of safety principles is an urgent necessity. Mr. Venkobachar has done well in bringing out a booklet in Kannada containing a fairly full account of the measures that the several agencies—Government, Municipality, Schools and Voluntary Associations—have to adopt to prevent road-accidents. Particular emphasis is laid on the duties of school-masters in this connection. He advocates the organisation of School Patrols and traffic games and recommends the inclusion of ' Safety First Principles ' in the curriculum of Primary and Middle Schools.

There are other useful sections dealing with home-safety, water-safety and cinema-safety. If instruction on the lines suggested by Mr. Venkobachar is imparted to both the youngsters and adults, I have no doubt that life amidst the heavy traffic in the cities will become comparatively safe.

The author has done a real service to the cause of humanity. I trust that his labours will be appreciated by the Department of Education and the general public."

* * *

**R. Kasturi Raj, Esq., B.A., B.L., Dip.-in-Edn. (Leeds), District Educational Officer, Bangalore District, Bangalore,** *dated 3rd January* 1939.—

" Mysore State, always abreast of times, has seen a development in rapid, mechanised locomotion which nobody would have dreamt of 20 years back. At the same time it must be admitted that the road sense of the people has not kept pace with this development. It is, therefore, incumbent on the teachers to inculcate in the younger generation safety first principles. With this object in view ' Safety First ' in Kannada by Mr. Venkobachar was introduced by the Department some time ago in the primary schools. The experience gained in writing this book he has utilised to advantage in producing one for the Middle Schools. This new book is well thought out and planned and is bound to prove very useful in providing training in safety first principles to be observed on the road, sea and air.

I have no hesitation in recommending that the book may be prescribed as a text-book in the Middle Schools."

* * *

**Rajacharitavisarada Rao Sahib C. Hayavadana Rao, Esq., B.A., B.L., Hon. Secretary and Treasurer, The Indian Red Cross Society (Mysore State Branch), Bangalore City,** *dated 7th December* **1938.—**

"I have gone through the manuscript of the Kannada book entitled 'Safety First' Kannada Reader No. 1, written by Mr. M. Venkobachar, B.A., B.T., Mysore Educational Department, and can say that it is written in a simple and easy style and covers the ground chosen in a comprehensive manner.

As the author of the first book on 'Safety First' in Kannada, now in use in Kannada Primary Classes, he has a firm grasp of the subject and can accordingly provide a suitable text-book for the next higher Middle School standard. A trained teacher and a good Kannada writer, Mr. M. Venkobachar deserves to be congratulated on the highly valuable illustrated book he has produced. It seems suitable for the introduction as a text-book in 'Safety First' into the Middle School classes as his Primer on the same subject has been found useful in connection with the Kannada Primary Classes. This book is eminently deserving of the favourable attention of Kannada Text-Book Committee both in Mysore and in the adjoining Provinces of Madras, Bombay and Coorg."

* * *

**Srimathi R. Kalyanamma, Editor, 'Saraswathi', Bangalore City,** *dated 9th November* **1938.—**

"ಬೆಂಗಳೂರು ಚಾಮರಾಜಪೇಟೆ ಗವರ್ನಮೆಂಟ್ ಮಿಡಲ್ ಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀಮಾನ್ ಎಂ. ವೆಂಕೋಬಾಚಾರ್ಯ, ಬಿ.ಎ., ಬಿ.ಟಿ. ಅವರು ಬರೆದಿರುವ 'ಪ್ರಾಣರಕ್ಷಣೆಯು ಪ್ರಥಮ' ಎಂಬ ಪುಸ್ತಕದ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿ ನೋಡಿದೆನು. ಇದು ಮೊದಲನೆಯ ಭಾಗ — ಇದರಲ್ಲಿ ಒಂಭತ್ತು ಅಧ್ಯಾಯಗಳಿವೆ. ನಮ್ಮ ದಿನಚರಿಯ ಪ್ರತಿಯೊಂದು ಕೆಲಸಕ್ಕೆ ಸಂಬಂಧಪಟ್ಟ ಅತ್ಯಗತ್ಯ ಮತ್ತು ಅತ್ಯಾವಶ್ಯಕವಾದ ಪ್ರತಿಯೊಂದು ಅಧ್ಯಾಯವೂ ಮಹಿಳೆಯರೂ ಮಕ್ಕಳೂ ಇತರರೂ ಅನುಕರಿಸಲು ಯೋಗ್ಯವಾದುದು. ಇಂತಹ ಉತ್ತಮ ಗ್ರಂಥವನ್ನು ಓದುವುದರಿಂದ ಮನೆಯಲ್ಲಿರತಕ್ಕ ಮಹಿಳೆಯರೂ, ಶಾಲೆಗೆ ಹೋಗತಕ್ಕ ಮಕ್ಕಳೂ ಬಹಳ ಪ್ರಯೋಜನವನ್ನು ಪಡೆಯುವರೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಗ್ರಂಥಕರ್ತರು 'ಈಗಾಗಲೇ ನವೀನ ವಿದ್ಯಾಭ್ಯಾಸ ಪದ್ಧತಿ' ಎಂಬ ಗ್ರಂಥವನ್ನು ಬರೆದು ವಿದ್ಯಾರ್ಥಿವೃಂದಕ್ಕೆ ಬಹಳ ಪ್ರಯೋಜನವಾಗುವಂತೆ ಮಾಡಿರುವರು. ಈ ಗ್ರಂಥವು ಅಚ್ಚಾಗಿ ಮಹಿಳೆಯರಿಗೂ, ಮಕ್ಕಳಿಗೂ, ಒಟ್ಟನಲ್ಲಿ ಎಲ್ಲರಿಗೂ ಬಹಳ ಪ್ರಯೋಜನವಾಗಲೆಂದು ಹಾರೈಸುವೆನು. ಸ್ತ್ರೀಯರು ತಿಳಿಯುವಂತಹ ವಿಷಯಗಳು ಈ ಗ್ರಂಥದಲ್ಲಿ ಬಹಳವಾಗಿವೆ. ಗ್ರಂಥವು ಬೇಗನೆ ಅಚ್ಚಾಗಿ ಸರ್ವರಿಗೂ ಪ್ರಯೋಜನವಾಗಲಿ. ಗ್ರಂಥಕರ್ತರ ಈ ಪವಿತ್ರ ಉದ್ಯಮಕ್ಕೆ ಸಾರ್ವಜನಿಕರೂ ಸರ್ಕಾರವೂ ಸಹಕಾರವನ್ನಿತ್ತು ಇಂತಹ ಉತ್ತಮ ಗ್ರಂಥಗಳು ಹೆಚ್ಚು ಹೆಚ್ಚಾಗಿ ಬರೆಯುವಂತೆ ಉತ್ತೇಜನ ಕೊಡಲಿ."

---

1086-39.— ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರು ಮುದ್ರಿಸಿರುವರು